

ತನು ನಿನ್ನದು ಜೀವ ನಿನ್ನದೋ ॥ ಪ ॥
ಅನುದಿನದಲಿ ಬಾಹ ಸುಖ ದುಃಖ ನಿನ್ನದಯ್ಯ ॥ ಅ.ಪ. ॥

ಸವಿನುಡಿ ವೇದ ಪುರಾಣ ಶಾಸ್ತ್ರಗಳ
ಕಿವಿಯಿಂದ ಕೇಳುವ ಕಥೆ ನಿನ್ನದೊ
ನವಮೋಹನಾಂಗೇರ ರೂಪವ ಕಣ್ಣಿಂದ
ಎವೆಯಿಕ್ಕದೆ ನೋಡುವ ನೋಟ ನಿನ್ನದಯ್ಯಾ ॥ ೧ ॥

ಒಡಗೂಡಿ ಗಂಧ ಕಸ್ತೂರಿ ಪರಿಮಳಗಳ
ಬಿಡದೆ ಲೇಪಿಸಿಕೊಂಬುದು ನಿನ್ನದು
ಷಡುರಸದನ್ನಕ್ಕೆ ನಲಿದಾಡುವ ಜಿಹ್ವೆ
ಕಡುರುಚಿಗೊಂಡರೆ ಆ ರುಚಿ ನಿನ್ನದಯ್ಯ ॥ ೨ ॥

ಮಾಯಾಪಾಶದ ಬಲೆಯೊಳಗೆ ಸಿಕ್ಕಿರುವಂಥ
ಕಾಯ ಪಂಚೇಂದ್ರಿಯಗಳು ನಿನ್ನವೊ
ಕಾಯಜ ಜನಕ ಒಡೆಯ ಆದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೇ ॥ ೩ ॥

– ಕನಕದಾಸರು:

# ಓದುಗರ ಓಲೆ

ಮಾನ್ಯರೆ;

ಉತ್ತಮ ಮುಖಚಿತ್ರಗಳಿಂದಲೂ ಆಕರ್ಷಕ ಲೇಖನಗಳಿಂದಲೂ ಕೂಡಿದ ಸಪ್ತಗಿರಿ ನಮ್ಮ ಮನೆಯವರೆಲ್ಲರ ನೆಚ್ಚಿನ ಮಾಸಪತ್ರಿಕೆ.

ಆಗಸ್ಟ್ 85 ರಲ್ಲಿ ಪ್ರಕಟವಾದ ಅಧ್ಯರಾಮಾಚಾರ್ಯರ ಪ್ರಭಾವೀಕರ್ನಾಟಕ ಲೇಖನ ಓದಿ ಆನಂದವಾಯಿತು. ಸಾವದೇವ ಲೇಖನ ಚೆನ್ನಾಗಿದೆ. ಇವರ ಜೀವನ ಕುರಿತು ಇನ್ನಷ್ಟು ಬರೆಯ ಬಹುದಿತ್ತು. ಸಂಪಾದಕೀಯ ಆಸಕ್ತಿದಾಯಕ ಆಗಿದ್ದಿತು.

ಟಿ ಬಸಪ್ಪ — ಶಿವಮೊಗ್ಗ

ಮಾನ್ಯರೆ;

ಆಗಸ್ಟ 85 ರ ಸಂಚಿಕೆಯಲ್ಲಿ ಮಹಾಲಕ್ಷ್ಮಿಯನ್ನು ಕುರಿತು ರಘುಸುತ ಇವರು ಬರೆದ ಲೇಖನ ಚೆನ್ನಾಗಿದೆ. ಧನ್ಯವಾದಗಳು.

ಗುರುರಾಜ ಕೆ. ಪಾಟೀಲ — ಕನಮಡಿ, ವಿಜಾಪುರ

ಮಾನ್ಯರೆ;

ಗಣೇಶಚತುರ್ಥಿಯ ಸಂದರ್ಭದಲ್ಲಿ ಪ್ರಕಟವಾಗಿರುವ ವಿಶ್ವವ್ಯಾಪಕ ಗಣಪತಿ ಸಕಾಲಿಕವಾಗಿದ್ದಿತು. (ಸೆಪ್ಟೆಂಬರ್ 1985) ಒಳಗಡೆ ಉಡುಪಿಯ ಶ್ರೀಕೃಷ್ಣ ದೇವಾಲಯದ ಬ್ರಹ್ಮರಥದ ಚಿತ್ರವನ್ನು ನೋಡಿ ತುಂಬಾ ಸಂತೋಷವಾಯ್ತು.

ಶ್ರೀಪತಿರಾವ್ ಪಲಿಮಾರ್ಕಾರ್ — ಉಡುಪಿ

ಮಾನ್ಯರೆ;

ಸೆಪ್ಟಂಬರ್ ತಿಂಗಳನಲ್ಲಿ ಮೂಡಿಬಂದ ಕನಕದಾಸರ ಹರಿಭಕ್ತಸಾರ ಮತ್ತು 'ಕಂಜಸಂಭವ ಪಿತನು ಬಂದ' ನನಗೆ ಹಿಡಿಸಿದವು. ಲೇಖಕರಿಗೆ ನನ್ನ ಧನ್ಯವಾದಗಳು.

ಜಯತೀರ್ಥ ಅಡವಿರಾವ್ — ರಾಯಚೂರು.

ಮಾನ್ಯರೆ;

ಆಗಸ್ಟ್ ತಿಂಗಳನಲ್ಲಿ ಪ್ರಕಟವಾದ ವೇದವಾಙ್ಮಯ ಪರಿಚಯ ಬಹಳ ಚನ್ನಾಗಿ ಬಂದಿದೆ ಮತ್ತು ಸೆಪ್ಟಂಬರ್ ತಿಂಗಳ ಸಂಚಿಕೆ ಆಗಸ್ಟನ ಕೊನೆಯ ವಾರದಲ್ಲೇ ಬಂದದ್ದು ಸಂತಸಕರ.

ಡಿ. ವಿ ದೇಶಪಾಂಡೆ — ವಿಜಾಪುರ.


# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ ತಿರುಚಾನೂರು

**ಸಂದರ್ಶಿಸಿ** **ಆನಂದಿಸಿ**



**ವಾರ್ಷಿಕ ಬ್ರಹ್ಮೋತ್ಸವಗಳು**

**8-11-85 ರಿಂದ 17-11-85 ವರೆಗೆ**

| ದಿನಾಂಕ | ವಾರ | ಹಗಲು ಉತ್ಸವ |
|---|---|---|
| 9-11-85 | ಶನಿ | ಧ್ವಜಾರೋಹಣ |
| 13-11-85 | ಬುಧ | ಗಜವಾಹನ |
| 14-11-85 | ಗುರು | ಗರುಡವಾಹನ |
| 16-11-85 | ಶನಿ | ರಥೋತ್ಸವ |
| 17-11-85 | ಭಾನು | ಅವಭೃತ |

ಸೂಚನೆ ದಿನವೂ ವಿವಿಧ ವಾಹನ ಸೇವೆಗಳು, ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳುಂಟು.

**ನೀವೂ ಬನ್ನಿ** **ನಿಮ್ಮವರನ್ನೂ ಕರೆತನ್ನಿ**



ಗೌರವ ಸಂಪಾದಕರು
ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್

ಸಂಪಾದಕ
ಕೆ. ಸುಬ್ಬಾರಾವು, ಎಂ.ಎ,

ಉಪಸಂಪಾದಕ
ಪಿ. ಎಸ್. ಶ್ರೀನಿವಾಸನ್ ಎಂ.ಎ,

ಮುದ್ರಣ
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ —ಸಂ॥

ಸಂಪುಟ ೧೬] ನವಂಬರ್ ೧೯೮೫ [ಸಂಚಿಕೆ ೬

# ವಿಷಯಸೂಚಿ

| | | |
|---|---|---|
| ತಿರುಮಂಗೈ ಆಳ್ವಾರ್ | ಡಿ ಕೃಷ್ಣಯ್ಯಂಗಾರ್ .. | 5 |
| ಜ್ಞಾನದೇವ | ಆರ್. ರಾಮಕೃಷ್ಣ .. | 7 |
| ಕನಕದಾಸರು ಕಂಡ ಸಮಾಜ | ಡಾ॥ ಯು ರಾಮಭಟ್ಟ .. | 9 |
| ಭರತನ ಭ್ರಾತೃ ಪ್ರೇಮ. | ಡಾ॥ ಎನ್. ಅನಂತರಂಗಾಚಾರ್ .. | 13 |
| ಶ್ರೀ ಭಾಷ್ಯ | ಎಂ. ಶ್ರೀನಿವಾಸ ಅಯ್ಯಂಗಾರ್ ... | 16 |
| ಸರ್ವಜ್ಞ | ಎ ಎಸ್ ಪಂಕಜ . | 17 |
| ದೀಪಾವಳಿ | ಪುತ್ತೂರು ವ್ಯಾಸಕೃಷ್ಣ ತಂತ್ರಿ ... | 20 |
| ಶ್ರೀ ವಿಜಯದಾಸರು | ಚಿಂಚೋಳಿ ಪ್ರಹ್ಲಾದಾಚಾರ್ಯ .. | 25 |
| ಭಕ್ತಕವಿ ಎಳುತ್ತಚ್ಚನ್ | ಎ.ಎಂ ದೇವಿ ... | 34 |
| ಗೃಹಲಕ್ಷ್ಮಿ | | |
| ದೇವಹೂತಿ | ರಘುಸುತ . | 11 |
| ಯುವವಾಣಿ | | |
| ಗುರುಪರಂಪರೆ | ಮತ್ತೀಕೆರೆ ಅನಂತು .. | 22 |
| ಕಿಶೋರಜಗತ್ | | |
| ವಾತ್ಸಲ್ಯ ವಾರಿಧಿ | ವಿದ್ವಾನ್ ಬ ನ. ಗುಂಡೂರಾವ್ ... | 31 |
| ಕರ್ನಾಟಕದಲ್ಲಿ | ... | 37 |
| ವಾರ್ತಾಲಹರಿ | ... | 38 |

ಮುಖ ಚಿತ್ರ : ಶ್ರೀ ಪದ್ಮಾವತೀದೇವಿಯವರ ಬ್ರಹ್ಮೋತ್ಸವದ ಗಜವಾಹನ
ಹಿಂಬದಿಯಲ್ಲಿ: ದೀಪಾವಳಿ
ಒಳಗಡೆಯಲ್ಲಿ: ಹೈದರಾಬಾದಿನಲ್ಲಿ ತಿ.ತಿ ದೇ. ಕಲ್ಯಾಣಮಂಟಪಕ್ಕೆ ಈಚೆಗೆ ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ಶಿಲಾನ್ಯಾಸ ಮಾಡಿದರು. ತಿ. ತಿ. ದೇ ಕಲ್ಯಾಣ ಮಂಟಪದ ಮಾದರಿ ಹಾಗೂ ತತ್ಸಂಥದಲ್ಲಿ ಏರ್ಪಡಿಸಲಾದ ಪುಸ್ತಕ ಬಿಡುಗಡೆ ಸಮಾರಂಭದ ಚಿತ್ರಗಳು.

# ಸಂಪಾದಕೀಯ

ಅಲ್ಲಿ ಮೃತ್ಯು ಇರಲಿಲ್ಲ, ಅಮೃತತ್ವವೂ ಇರಲಿಲ್ಲ. ಇರುಳುಬೆಳಕಿನ ನಡುವೆ ಭೇದ ಇರಲಿಲ್ಲ. ಅಲ್ಲಿದ್ದದ್ದು ಸ್ಪಂದನ ಶೂನ್ಯ ಹತ್ತುವ ತೆಳ್ಳ ಕತ್ತಲು ಕತ್ತಲನ್ನಾವರಿಸಿತ್ತು. ನಂತರದಲ್ಲೆಲ್ಲೋ ಮೊದಲು ಮೂಡಿತ್ತು ಮನಃಕಾಮವೆಂಬ ಮಾಯೆ. ಅಲ್ಲಿಂದ ಸೃಷ್ಟಿ ಆರಂಭವಾಯಿತು.

ಋಗ್ವೇದದ ನಾಸದೀಯ ಸೂಕ್ತ ಸೃಷ್ಟಿ ಮೂಲವನ್ನು ಹುಡುಕುತ್ತ ಹೇಳುವ ಮಾತುಗಳು ಮಾನವ ಮನವನ್ನು ಬೆಳಕಿನತ್ತ ಒಯ್ಯುವ ಕಿರಣಗಳಾಗಿವೆ. ಮಾನವನ ಮಿತಿಯಲ್ಲೂ ಮೊದಲು ಅಜ್ಞಾನ – ಅಂಧಂತಮಸ್ಸು – ಇರುವುದು ಸಹಜ. ಅಲ್ಲಿಂದ ಬೆಳಕಿನೆಡೆಗೆ ತುಯ್ಯುವ ಕ್ರಿಯೆ ಆರಂಭ. ಎಂತಲೇ ನಿರಂತರವಾದ ಪ್ರಾರ್ಥನೆ – 'ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ ಕೈಹಿಡಿದು ನಡೆಸೆನ್ನನು' ಎಂಬುದು ಇದೇ ಬದುಕಿನ ಗುರಿಯೂ ಕೂಡ

ಇಂತಲ್ಲಿ ದೀಪಾವಳಿ ಹಬ್ಬ ಸಂಕೇತಿಸುವುದೇನನ್ನು ಎಂಬುದು ಗಮನಾರ್ಹ. ದೀಪಾವಳಿ ಹೆಸರೇ ಹೇಳುವಂತೆ ಬೆಳಕಿನ ಹಬ್ಬ. ಮನೆಯೊಳಗೆ ಹೊರಗೆ ದೀಪಗಳ ಸರಮಾಲೆಯನ್ನಿಟ್ಟು ದೇವತೆಗಳಿಗ, ಪಿತೃಗಣಕ್ಕೆ ಬೆಳಕಿನ ಪ್ರೀತಿ ಉಂಟುಮಾಡುವುದೇ ಮುಖ್ಯ ಉದ್ದೇಶವೇನಲ್ಲ, ಒಳಗೂ ಹೊರಗೂ ಬೆಳಕಾಗಿ ಬದುಕು ನಡೆಯಲಿ ಎಂಬ ಅಪೇಕ್ಷೆಯ ಸಂಕೇತವೂ ಹೌದು. ನರಕಾಸುರನ ನಾಶದಿಂದ ಉಂಟಾದ ಆನಂದದ ಹೊನಲು ಈ ರೀತಿಯಾಗಿ ಹರಿದಿದ ಎಂದರೂ ಅಷ್ಟೆ, ಅಜ್ಞಾನದ ನರಕ ನಾಶವಾಗಿ ಜ್ಞಾನದಿವ್ಯ ಬೆಳಗುವುದು ಎಂದೇ. ಸ್ವತಃ ಕೃಷ್ಣನೇ ಮುಂದು ಬಂದಾಗ, ತನಗೆ ಅರ್ಪಿತವಾದ ಸತ್ಯಭಾಮಾ ಸೂತ್ರದಿಂದ, ತನ್ನಿಂದ ದೂರವಾದ ಅಜ್ಞಾನ ನರಕವನ್ನು ನಾಶಮಾಡುವುದರಲ್ಲೇನು ಸಂದೇಹ ಅಥವಾ ಇದೆಲ್ಲ 'ಅವನ' ಲೀಲೆಯೇ ಇರಬೇಕು. ಅಜ್ಞಾನವನ್ನು ಉಂಟುಮಾಡುವುದು–ನಂತರ ಅದನ್ನು ಬೆಳಕಿಗೊಡ್ಡುವುದು–ಆ ಮೂಲಕ ಅದನ್ನು ದೂರಮಾಡಿ ಜೀವಿಯನ್ನು ತನ್ನತ್ತ ಸೆಳೆದುಕೊಳ್ಳುವುದು – ಹೀಗೆ ಆತ ಕೊಟ್ಟ ಒಡವೆ ಬೆಳಕು ಎಂಬುದಿರಬೇಕು.

ಇದೆಲ್ಲ ಹುತಾತ್ಮಯಿತು ಎನ್ನಿಸಬಹುದೇನೊ, ಮುಖ್ಯ ಅಂಶ ಇಷ್ಟು. ಹಬ್ಬಗಳಲ್ಲಿ ಬೆಳಕು ದೀಪಾವಳಿ ಬೆಳಕನ್ನೆ ಸೂಚಿಸುತ್ತದೆ. 'ತಮಸೋಮಾ ಜ್ಯೋತಿರ್ಗಮಯ' ಎಂಬ ಮಾನವ ಮನದಪೇಕ್ಷೆಯನ್ನು ಪ್ರತಿಬಿಂಬಿಸಿ ಒಂದು ಸಾಮಾಜಿಕ ಸಾಂಸ್ಕೃತಿಕ ವಾತಾವರಣದಲ್ಲಿ ಹುದುಗಿರುವ ಜ್ಞಾನಾಕಾಂಕ್ಷೆಯನ್ನು ಜೀವದ ದೇವಸತ್ವದ ಪಯಣವನ್ನು ಸಂಕೇತಿಸುತ್ತದೆ.

ಅವನಿಂದಾದ ಬೆಳಕು, ಅವನಿಂದಲೇ ಆದ ನಮ್ಮನ್ನೂ ತಲುಪಲಿ ಎಂಬುದೇ ಇಲ್ಲಿನ ಪ್ರಾರ್ಥನೆ ಆಗಬೇಕು.

# ತಿರುಮಂಗೈ ಆಳ್ವಾರ್

ತಿರುಮಂಗೈಯಾಳ್ವಾರವರು ವೇದಾಂಗಗಳ ವಿವರಣೆಯನ್ನು ತಿಳಿಸತಕ್ಕ ಆರು ದಿವ್ಯ ಪ್ರಬಂಧಗಳನ್ನು ರಚಿಸಿದ್ದಾರೆ, ಪೆರಿಯ ತಿರುಮೊಳಿ, ತಿರುಕ್ಕುರುಂದಾಂಡಗಂ ತಿರುನೆಡುಂದಾಂಡಗಂ, ತಿರುವೆಳುಕ್ಕೂಱ್ ತಿರುಕ್ಕೈ, ಶಿರಿಯಮಡಲ್, ಪೆರಿಯಮಡಲ್. ದಕ್ಷಿಣ ಭಾರತದ ದಿವ್ಯಕ್ಷೇತ್ರಗಳಲ್ಲಿ ಬಿಜಯಮಾಡಿರುವ ಅರ್ಚಾಮೂರ್ತಿಗಳನ್ನು ದರ್ಶನ ಮಾಡಿ, ಅವುಗಳ ಮಹಿಮೆಯನ್ನು, ವೈಭವವನ್ನು ಬಹು ಸೊಗಸಾಗಿ ಹಾಡಿದ್ದಾರೆ.

ಭಗವಚ್ಛಾಸ್ತ್ರವೆಂದು ಪ್ರಸಿದ್ಧವಾಗಿರುವ ಪಾಂಚರಾತ್ರವು ಪರಮಾತ್ಮನ ಪಂಚರೂಪಗಳ ಮಹಿಮೆಯನ್ನು ತಿಳಿಸುತ್ತದೆ. ಶ್ರೀ ವೈಕುಂಠದಲ್ಲಿ ಪರರೂಪದಲ್ಲಿಯೂ, ಕ್ಷೀರಾಬ್ಧಿಯಲ್ಲಿ ವ್ಯೂಹ ರೂಪದಲ್ಲಿಯೂ, ವಿಭವರೂಪದಲ್ಲಿ ರಾಮಕೃಷ್ಣಾದಿ ಅವತಾರವಾಗಿಯೂ, ಸರ್ವರ ಹೃದಯದಲ್ಲಿ ಅಂತರಾತ್ಮ ರೂಪದಲ್ಲಿಯೂ, ಅರ್ಚಾರೂಪದಲ್ಲಿ ದಿವ್ಯಮಂಗಳಯುಕ್ತನಾಗಿಯೂ, ಪರಮಾತ್ಮನು ದರ್ಶನವಿತ್ತು ತನ್ನ ದಿವ್ಯ ಮಹಿಮೆಯನ್ನು ವ್ಯಕ್ತಪಡಿಸಿದ್ದಾನೆಂದು ತಿಳಿಸಲಾಗಿದೆ. ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಬರಬೇಕೆಂಬ ನಿಯಮವೇನೂ ಇಲ್ಲ. ಅರ್ಚಾಮೂರ್ತಿ ಸಿದ್ಧಾಂತವನ್ನು, ತಿರುಮಂಗೈಯಾಳ್ವಾರರು ಬಹುಚೆನ್ನಾಗಿ ವಿವರಿಸಿದ್ದಾರೆ. ವೈಕುಂಠದ ಪರರೂಪದಲ್ಲಿ ನಿತ್ಯಸೂರಿಗಳು ಪರಮಾತ್ಮನ ವೈಭವವನ್ನು ಅನುಭವಿಸುವಂತೆ ಅದಕ್ಕೆ ಸಮಾನವಾದ ಆನಂದವನ್ನು ಅರ್ಚಾರೂಪದಲ್ಲಿ ಇಲ್ಲಿಯೇ ಅನುಭವಿಸಬಹುದೆಂಬುದಾಗಿ ಆಳ್ವಾರರು ಬಹುಚೆನ್ನಾಗಿ ತಿಳಿಸಿದ್ದಾರೆ.

ತಿರುಮಂಗೈಯಾಳ್ವಾರರು, ಪೆರುಮಾಳ್ ತಿರುಮೊಳಿಯಲ್ಲಿ ತಮ್ಮ ಪರಿತಾಪದ ಬೇಗೆಯನ್ನೂ, ತಮ್ಮ ಜೀವನದ ಚರಿತ್ರೆಯನ್ನೂ, ತಮ್ಮ ಬಾಳು, ಭಕ್ತಿಯ ಮೂಲಕ ಭವ್ಯವಾದ ರೀತಿಯನ್ನೂ, ವರ್ಣಿಸಿದ್ದಾರೆ. ಪರಮಾತ್ಮನ ಪರಮ ಕಾರಣಿಕತ್ವವನ್ನೂ ಪತಿತಪಾವನತ್ವವನ್ನೂ ಚಿತ್ರಿಸಿದ್ದಾರೆ. ಆಳ್ವಾರರು ತಮ್ಮ ಪಶ್ಚಾತ್ತಾಪದ ದೀರ್ಘ ನಿಟ್ಟುಸಿರೋ ಎನ್ನುವಂತೆ ಹೀಗೆ ಹೇಳಿದ್ದಾರೆ.

"ಕಳ್ಳ ನಾನು ಕೆಡುಕುಮಾಡಿದ್ದೇನೆ. ಆದರೂ ಉದ್ಧಾರ ಮಾರ್ಗವನ್ನು ಸೇರಿದೆನು. ಹೃದಯ ಕರಗಿ ಕೂಗಲು ಸರಿಯಾಗಿ ಧ್ವನಿಬಾರದೆ, ಮೈಯೆಲ್ಲಾ ಕಣ್ಣೀರಿನಲ್ಲಿ ನೆನೆದು, ಕತ್ತಲು ರಾತ್ರಿಯಲ್ಲಿ ನಾನು ಕೂಗುತ್ತಿರುವೆನು, ನಾರಾಯಣ– ಎಂಬ ನಾಮವನ್ನು.

"ಹೇ! ದೇವಾ! ನದಿಯ ದಡದಲ್ಲಿ ಬೆಳೆದು ನಿಂತ ಮರದಂತೆ, ಬಾಳಿನ ಸುಳಿಯಲ್ಲಿ ಸಿಲುಕಿ ಬುಡಸಹಿತ ಅಳಿಯುವನೇನೋ ಎಂದು ಅರಿತಿದ್ದೆನು. ಮತ್ತೊಮ್ಮೆ ಸಂಸಾರದಲ್ಲಿ ಬೀಳುವೆನೇನೋ ಎಂದು ಕರಗುತ್ತಿರುವ ನನ್ನ ಹೃದಯವನ್ನು ನಿನ್ನಲ್ಲಿಗೆ ತಂದಿರುವೆನು. ಹೇ! ಪ್ರಭುವೇ! ಬೇವಿನ ಎಲೆ ಕಹಿಯಾದರೂ ಅದನ್ನು ತಿಂದು ಬದುಕುವುದು ಅದರ ಹುಳು. ಹೀಗಿರಲು ನಿನ್ನ ಪಾದದ ಸಿಹಿಯನ್ನು ಸವಿದು, ಅವೇ ನನ್ನ ಬದುಕೆಂದು ಬಗೆದು ಅವುಗಳನ್ನು ಪ್ರೀತಿಸುವುದು ಏನಾಶ್ಚರ್ಯ!

"ಹಲವು ವಿಧದ ಪಾಪವನ್ನು ಮಾಡಿ ಸಮೆದೆನು. ಶಕ್ತವಾದ ನಿನ್ನ ಅಡಿಯನ್ನು ಬೇಡುವ ಮನೋಧರ್ಮವಿಲ್ಲವಾದೆನು. ಹಲವು ಭೋರ್ಗಲ್ಲು ಸುತ್ತಿರುವ ತಿರುವೇಂಗಡದ ಮಾಯಲೆಯ ನನ್ನಪ್ಪಾ! ಬಂದು ಸೇರಿದೆನು. ನನ್ನನ್ನು ಆಳುಮಾಡಿ ಕೊಂಡು ಅನುಗ್ರಹಿಸು

"ಕೋಲೂರಿ ನಡೆಯುವಂತಹ ಮುಪ್ಪು ನನ್ನಮೇಲೆ ಸುಳಿಯುವ ಮುನ್ನ, ಕಾಲೂರಿ ನಿಂತಾಗ ತೂಗಾಡುವ ಗತಿ ಬರುವ ಮುನ್ನ, ತನ್ನ ತಾಯಂತೆ ಬಂದ ರಕ್ಕಸಿಯ ಉಸಿರನ್ನು ಹೀರಿದ ನನ್ನ ಸ್ವಾಮಿಗೆ ತಲೆಬಾಗುವೆ".

ಹೀಗೆ ತಿರುಮಂಗೈಯಾಳ್ವಾರರು ಪೆರಿಯ ತಿರುಮೊಳಿಯಲ್ಲಿ, ಅಷ್ಟಾಕ್ಷರೀಮಂತ್ರದ ವಿವರಣೆ ಮತ್ತು ಅದರ ಮಹಿಮೆಯನ್ನು ವಿವರಿಸಿದ್ದಾರೆ. ನೂರಾರು ಪದ್ಯಗಳಲ್ಲಿ, ತಿರುನಗರಿ ಕಲ್ಯಾಣ ರಂಗನಾಥ, ಬದರಿಕಾಶ್ರಮದ ನಾರಾಯಣ ಮತ್ತು ಅಹೋಬಿಲ, ತಿರುಪತಿ, ತಿರುವಳ್ಳೂರು, ತಿರುವಲ್ಲಿಕ್ಕೇಣಿ, ತಿರುಕ್ಕೋವಲೂರು, ತಿರುಮಂಗೈ, ತಿರುಮಾಲಿರುಂಶೋಲೆ, ತಿರುಕ್ಕುರಂಗಡಿ, ಕಾಂಚೀಪುರ, ಶ್ರೀರಂಗಂ ಮುಂತಾದ ದಿವ್ಯದೇಶಗಳಲ್ಲಿ ಬಿಜಯಮಾಡಿರುವ ಅರ್ಚಾಮೂರ್ತಿಗಳ ಮಹಿಮೆಯನ್ನು ಮನಮುಟ್ಟುವಂತೆ ವರ್ಣಿಸಿದ್ದಾರೆ. ತಿರುವೇಂಗಡ ಕ್ಷೇತ್ರದ ಮಹಾಶ್ಚರ್ಯಗಳನ್ನೂ ಹೂದೋಟಗಳನ್ನೂ, ಸುತ್ತಲೂ ಹಬ್ಬಿರುವ ಘನಗಿಡಗಳನ್ನೂ, ಬಹುಚೆನ್ನಾಗಿ ವರ್ಣಿಸಿದ್ದಾರೆ. ತಿರುವೇಂಗಡದ ಪರಮಾತ್ಮನಲ್ಲಿ ಅವರು ಪ್ರಾರ್ಥಿಸಿರುವ ಬಿನ್ನಹ ಬಹು ಅರ್ಥಗರ್ಭಿತವಾಗಿದೆ. ಅದು ಅವರ ಹೃದಯಾಂತರಾಳದಿಂದ ಬಂದ ಸವಿನಯ ಬೇಡಿಕೆಯಂತಿದೆ. ಈ ಬೇಡಿಕೆಯು ಅವರ ಪಶ್ಚಾತ್ತಾಪದ ಭಕ್ತಿಯುತ ಉನ್ನತಿಯನ್ನು ಸೂಚಿಸುತ್ತದೆ.

"ಬಹು ದುಃಖವನ್ನು ಕೊಡತಕ್ಕ ಸಂಸಾರದಲ್ಲಿ ಹುಟ್ಟಿ, ಶರೀರದಿಂದ ನೊಂದು ಹೋಗಿ, ಮನಸ್ಸಿನಿಂದ ದುಃಖ ಅನುಭವಿಸಿದೆನು. ಸುಖದ ಅಮಲಿನಿಂದ ಸ್ತ್ರೀಯರ ಜೊತೆ ಕೂಡಿ, ಅವರು ಕೊಡುವ ಭೋಗವೇ ದೊಡ್ಡದೆಂದು ತಿಳಿದು ತಿರುಗಾಡಿದೆನು. ಅದರಲ್ಲಿ ಸುಖಕಾಣದೆ, ನಿಜವಾದ ಸುಖಕ್ಕಾಗಿ ಅಲೆದಾಡಿ ನನ್ನ ಸ್ವಾಮಿಯ ಅನುಗ್ರಹದಿಂದ ಉನ್ನತ ಮಟ್ಟದಜ್ಞಾನವನ್ನು ಪಡೆದನು.

**ಶ್ರೀ ಡಿ. ಕೃಷ್ಣ ಅಯ್ಯಂಗಾರ್**

"ನಾರಾಯಣ ಸ್ಮರಣೆಯು ಸತ್ಕುಲವನ್ನು ಕೊಡುವುದು ಅಪಾರ ಐಶ್ವರ್ಯವನ್ನು ಕೊಡುವುದು, ಭಕ್ತರು ಅನುಭವಿಸುವ ದುಃಖವನ್ನು ನಿವಾರಣೆ ಮಾಡುವುದು. ವೈಕುಂಠಕ್ಕೆ ಸೇರಿಸುವುದು. ಕೈಂಕರ್ಯ ಸಾಮ್ರಾಜ್ಯವನ್ನು ಅನುಗ್ರಹಿಸುವುದು, ಹೆತ್ತ ತಾಯಿಗಿಂತ ಹೆಚ್ಚಿನ ಕ್ಷೇಮವನ್ನುಂಟು ಮಾಡುವುದು, ಇಂತಹ ಪವಿತ್ರವಾದ ನಾರಾಯಣ ಎಂಬ ನಾಮವನ್ನು ಕಂಡು ಕೊಂಡೆನು. ಹೇ, ಮನಸ್ಸೇ! ನನ್ನ ಸ್ವಾಮಿಯನ್ನು ಯಾವಾಗ ಹಾಡುವೆನು. ಸಾವಿರ ನಾಮವುಳ್ಳ ನಾರಾಯಣನನ್ನು ನಾನು ಯಾವಾಗ ಹಾಡಿ ಆಡುವೆನು. ಯಾವಾಗ ಅವನ ಪಾದಾರವಿಂದಗಳಲ್ಲಿ ನನ್ನ ಶಿರಸ್ಸನ್ನು ಇಡುವೆನು."

ತಿರುಕ್ಕುರುಂದಾಂಡಗದಲ್ಲಿ ತಿರುಮಂಗೈಯಾಳ್ವಾರರು ಪರಮಾತ್ಮನ ವೈಭವವನ್ನು ಕುರಿತು ಹೀಗೆ ಹಾಡಿದ್ದಾರೆ. "ನನಗೆ ನಿಧಿಯಾಗಿಯೂ, ಹವಳದ ಶರೀರದಂತೆ ಪ್ರಕಾಶಮಾನವಾಗಿಯೂ, ಭಕ್ತಿಹೊಂದಿದ ಚೇತನನಿಗೆ ಗತಿಯಾಗಿಯೂ, ಕಂಸನನ್ನು ಸಂಹಾರ ಮಾಡುವ ರೂಪವಿದ್ದರೂ, ಎಲ್ಲರ ದರ್ಶನಕ್ಕೆ ಅರ್ಹವಾದ ಸೌಂದರ್ಯವುಳ್ಳವನಾಗಿಯೂ ಇರುವ, ಪ್ರಪಂಚವನ್ನು ಆಳ ತಕ್ಕ ಚಂದ್ರನಂತೆ ಸುಂದರವಾಗಿರುವ ಪರಮಾತ್ಮನನ್ನು ಮಂಗಳಾಶಾಸನ ಮಾಡಿ ನಮಸ್ಕರಿಸುವಾಗ ನನ್ನ ಮನಸ್ಸಿನಲ್ಲಿ ಕಾಣಿಸಿಕೊಂಡ ಪ್ರಭುವನ್ನು ನಾನು ಬಿಡುವುದಿಲ್ಲ

"ಭಗವಂತನನ್ನು ಭಕ್ತಿಯಿಂದ ಹಾಡಿದವರು. ತಮ್ಮ ಜನ್ಮವನ್ನು ನೀಗಿಸಿಕೊಂಡರು. ಕೃಪಾಶಾಲಿಯಾದ ಸ್ವಾಮಿಯ ಹೆಸರನ್ನು ಹೇಳಿ, ಅದನ್ನು ನಾಲಿಗೆಯನ್ನಾಗಿ ಉಪಯೋಗಿಸಿಕೊಂಡವರು ಉಜ್ಜೀವಿತರಾದರು. ಆದರೆ ನಾನು ನನ್ನ ಜನ್ಮವನ್ನು ಉದ್ಧಾರ ಮಾಡಿಕೊಳ್ಳುವುದಕ್ಕೆ ಪರಮಾತ್ಮನ ಪವಿತ್ರ ನಾಮವನ್ನು ಹೇಳುವೆನು. ನನ್ನ ಮನಸ್ಸಿನಲ್ಲಿ ಸಮುದ್ರದಂತೆ ವರ್ಣಹೊಂದಿರುವ ಶ್ರೀಮನ್ನಾರಾಯಣನ ಪಾದಾರವಿಂದಗಳಲ್ಲಿ ಪ್ರೀತಿ ಹೆಚ್ಚಲಿ" ಎಂದಿದ್ದಾರೆ.

ತಿರುನೆಡುಂದಾಂಡಗದಲ್ಲಿ ತಿರುಮಂಗೈಯಾಳ್ವಾರರು ಇನ್ನು ಹೆಚ್ಚಿನ ಭಕ್ತಿಭಾವವನ್ನು ವ್ಯಕ್ತಪಡಿಸಿದ್ದಾರೆ. ಮಿಂಚಿನ ರೂಪದಲ್ಲಿಯೂ, ದೀಪ ಪ್ರಭೆಯಲ್ಲಿಯೂ, ವೃದ್ಧಿ ಹೊಂದುತ್ತಿರುವ ಚಂದ್ರನಲ್ಲಿಯೂ, ಅನಂತ ರೂಪನಾಗಿಯೂ, ಜನ್ಮಾದಿ ವಿಕಾರ ರೂಪಗಳಿಲ್ಲದವನಾಗಿಯೂ, ಜನ್ಮ, ಮೃತ್ಯು, ಜರಾದಿಗಳಿಲ್ಲದವನಾಗಿಯೂ, ಸ್ವಸ್ವರೂಪನಾಗಿಯೂ, ಮಣಿಯಂತೆ ಪ್ರಕಾಶಮಾನನಾಗಿಯೂ, ಪಂಚಭೂತ ಮತ್ತು ಅವುಗಳ ವಿಶೇಷ ರೂಪವುಳ್ಳವನಾಗಿಯೂ ಇರುವ ನನ್ನ ಸ್ವಾಮಿ ಪರಮಾತ್ಮನ ಪಾದಾರವಿಂದಗಳು ನನ್ನ ತಲೆಯಮೇಲಿರಲಿ." ಗೀತಾ ನಿರೂಪಣೆಯನ್ನು ಇಲ್ಲಿ ಪ್ರತಿಪಾದಿಸಲಾಗಿದೆ.

"ಮಹಾ ಪಾಪಿಯಾಗಿಯೂ, ನಾನು ಪರಮಾತ್ಮನನ್ನು ಸ್ಮರಿಸಬಲ್ಲ ಭಾಗ್ಯ ಪಡೆದಿದ್ದೇನೆ. ಪರಮಾತ್ಮನು ನಾಳಿನ ಅರಸು. ಸಮುದ್ರವನ್ನು ಕಡೆದು, ಸಮುದ್ರಕ್ಕೆ ಸೇತುವೆ ಕಟ್ಟಿದ ಮಹಾಪುರುಷ ಅವನು. ಪ್ರಬಲ ರಾಕ್ಷಸನಾದ ರಾವಣನನ್ನೂ, ಅವನ ಕುಲವನ್ನೂ ನಾಶಮಾಡಿ ಜಯಗಳಿಸಿದ ಧೀರ. ಬೆಟ್ಟವನ್ನು ಹೊತ್ತ ಬಾಹುಗಳನ್ನು ಪಡೆದವನನ್ನೂ, ತಿರುವಣ್ಣಗರವೆಂಬ ದಿವ್ಯ ದೇಶವನ್ನು ಪ್ರೀತಿಯಿಂದ ಸೇರಿ ಅಲ್ಲಿ ನಿರಂತರವಾಗಿ ನಿಂತವನನ್ನೂ ಕುಂಭಕೋಣದಲ್ಲಿ ಪವಡಿಸಿರುವವನನ್ನೂ, ವಿಭುವಾಗಿರುವವನನ್ನೂ, ಅವನ ಪಾದಪದ್ಮಗಳನ್ನೂ ನಾನು ಸದಾ ಸ್ಮರಿಸಿಕೊಳ್ಳುತ್ತಿರುವೆನು."

ತಿರುವೆಳುಕ್ಕೂರ್ ತಿರುಕ್ಕೈ ಎಂಬ ದಿವ್ಯ ಪ್ರಬಂಧವು ರಚನೆಯಲ್ಲಿಯೂ ಅನುಭವದಲ್ಲಿಯೂ, ಪ್ರಾಚೀನ ಶೈಲಿಯನ್ನು ಹೊಂದಿದೆ. ಆಳ್ವಾರರಿಗೆ ಎಂತಹ ಅದ್ಭುತ ಪಾಂಡಿತ್ಯವಿತ್ತು ಎಂಬುದನ್ನು ಇದು ವ್ಯಕ್ತಪಡಿಸುತ್ತದೆ. ತಿರುಮಂಗೈಯಾಳ್ವಾರರು ಈ ಪ್ರಬಂಧದಲ್ಲಿ ಪರಮಾತ್ಮನಲ್ಲಿ ಶರಣಾಗತಿ ಮಾಡಿ ಅವನನ್ನೇ ಆಶ್ರಯಿಸಿ ಅವನ ಕೈಂಕರ್ಯ ಮಾಡುವುದಾಗಿ ಬಿನ್ನವಿಸಿದ್ದಾರೆ.

"ಹೇ! ಪರಮಾತ್ಮಾ! ದಕ್ಷಿಣಾಗ್ನಿ, ಆಹವನೀಯ. ಗಾರ್ಹಪತ್ಯ ಎಂಬ ಮೂರು ಅಗ್ನಿ ಆರಾಧಕರೂ, ಋಕ್, ಸಾಮ,

(36 ನೇ ಪುಟ ನೋಡಿ)


## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ, ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲ ಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಅರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ. 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ. ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ಜ್ಞಾನದೇವ

ಜ್ಞಾನದೇವ (1275 ? – 1296) ಒಬ್ಬ ಮಹಾದಾರ್ಶನಿಕ. ಮರಾಠೀ ಭಕ್ತಿಪಂಥ ಪ್ರವರ್ತಕ ಕವಿಗಳ ಪೈಕಿ ಅಗ್ರಗಣ್ಯ. ದರ್ಶನ ಮತ್ತು ಸಾಹಿತ್ಯ ಲೋಕದಲ್ಲಿ ಚಿರಂತನ ಹೆಸರು ಪಡೆದವನು. ಜ್ಞಾನದೇವನ ತಂದೆ ವಿಠಲಪಂತ ಮಹಾ ವಿರಕ್ತ. ತಾಯಿ ರುಕ್ಮಾಬಾಯಿ ಮಹಾ ಸಾಧ್ವಿ. ಸ್ತ್ರೀಸಹಜ ಬಯಕೆಯಾದ ಸಂತಾನ ಪ್ರಾಪ್ತಿಯಲ್ಲಿ ಕಾತರಳಾಗಿದ್ದ ಆಕೆಯನ್ನು ತೊರೆದು ಕಾಶಿಗೆ ಹೋಗಿ ಶ್ರೀಪಾದ ಆಚಾರ್ಯರಿಂದ ವಿಠಲಪಂತ ಸನ್ಯಾಸದೀಕ್ಷೆ ಪಡೆದ ಸ್ವಲ್ಪ ಕಾಲದಲ್ಲೇ ಶ್ರೀಪಾದರು ರಾಮೇಶ್ವರ ಯಾತ್ರೆಗೆ ಹೊರಟರು. ಮಾರ್ಗದ ಮಧ್ಯದಲ್ಲಿ ಆಳಂದೀ ಎಂಬ ಊರಿನಲ್ಲಿ ತಂಗಿದ್ದಾಗ ರುಕ್ಮಾಬಾಯಿ ಬಂದು ವಂದಿಸಿ ಪೂಜಿಸಿ 'ಪುತ್ರವತೀ ಭವ' ಎಂಬ ಆಶೀರ್ವಾದ ಪಡೆದಳು ಆಕೆ ಸನ್ಯಾಸಿಯಾದ ವಿಠಲ ಪಂತನ ಪತ್ನಿಯೆಂದು ತಿಳಿದಾಗ ಆಚಾರ್ಯರು ಖೇದಗೊಂಡರು. ರುಕ್ಮಾಬಾಯಿ ಸಂತಾಪಪರಿಹಾರಕ್ಕಾಗಿಯೂ ತಮ್ಮ ಆಶೀರ್ವಚನದ ಸಿದ್ಧಿಗಾಗಿಯೂ ವಿಠಲಪಂತನನ್ನು ಸಂಸಾರಧರ್ಮದಲ್ಲಿ ಪುನಃ ನಿರತನಾಗುವಂತೆ ಆಜ್ಞಾಪಿಸಿದರು. ದಂಪತಿಗಳು ಒಂದಾದರು. ಅವರಿಗೆ ನಿವೃತ್ತಿ, ಜ್ಞಾನದೇವ, ಸೋಪಾನ ಎಂಬ ಪುತ್ರರು ಮುಕ್ತಾ ಎಂಬ ಪುತ್ರಿಯೂ ಜನಿಸಿದರು. ವಿಠಲಪಂತನು ಸನ್ಯಾಸ ಧರ್ಮದಿಂದ ಸಂಸಾರ ಧರ್ಮಕ್ಕೆ ಹಿಂದಿರುಗಿದ್ದರಿಂದಲೂ, ಸನ್ಯಾಸಿಗಳಿಗೆ ವರ್ಣವ್ಯವಸ್ಥೆ ಇಲ್ಲದ್ದರಿಂದಲೂ, ಅವನ ಮಕ್ಕಳನ್ನು ಹೇಗೆ ಪುನೀತರಾಗಿಸಬೇಕು ಎಂಬ ಜಿಜ್ಞಾಸೆ ಇದ್ದುದರಿಂದಲೂ,ಅವನ ಕುಟುಂಬವನ್ನು ಬಹಿಷ್ಕರಿಸಲಾಯಿತು. ಆದುದರಿಂದ ಜಾತಿ ವ್ಯವಸ್ಥೆಗೆ ಮತ್ತೆ ಮರಳಲು ಅವರು ಶುದ್ಧಿಪತ್ರವನ್ನು ತರಲು ಪೈಠಣಕ್ಕೆ ಹೋಗಬೇಕಾಯಿತು. ಪತ್ರವನ್ನು ಪಡೆದ ತರುವಾಯ ನೆವಾಸೆ ಎಂಬ ನಗರದಲ್ಲಿ ವಾಸ್ತವ್ಯ ಹೂಡಿದರು. (ಗೋದಾವರೀ ನದಿಯ ಉಪನದಿ ಪ್ರವರಾ ಎಂಬುದರ ದಂಡೆಯ ಮೇಲಿದ್ದ ಪ್ರಾಚೀನ ನಗರ ನೆವಾಸೆ. ಅಹಮದನಗರ ಜಿಲ್ಲೆಗೆ ಸೇರಿದೆ ) ಇಲ್ಲಿ ಪಂಢರಪುರದ ವಿಠಲನ ಮಹಾಭಕ್ತ ನಾಮದೇವನೊಡನೆ (1270–1350) ಆಧ್ಯಾತ್ಮಿಕ ಗೆಳೆತನ ಬೆಳಸಿದ ಜ್ಞಾನದೇವ, ಅವನೊಡನೆ ಉತ್ತರ ಭಾರತದ ಪುಣ್ಯಕ್ಷೇತ್ರ ಸಂದರ್ಶಿಸಿದ. ಯಾತ್ರೆ ಮುಗಿಸಿ ವಾಪಸ್ ಬರುವಾಗ ಆಳಂದೀ ಎಂಬಲ್ಲಿ ಸ್ವಇಚ್ಛೆಯಿಂದ ಯೋಗಸಮಾಧಿಮರಣ ಪಡೆದ (1296). ಆಳಂದೀ ಈಗ ಮಹಾರಾಷ್ಟ್ರದ ಮಂದಿಗೆಲ್ಲಾ ಪುಣ್ಯಕ್ಷೇತ್ರವಾಗಿದೆ.

ಜ್ಞಾನದೇವನ ಜನ್ಮಸ್ಥಳ ಮತ್ತು ಜನನ ವರ್ಷದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವರು ಮಹಾರಾಷ್ಟ್ರದ ಪುಣೆಪ್ರಾಂತದ ಆಳಂದೀ ಎಂಬಲ್ಲಿ ಅವನ ಜನನವಾಯಿತೆಂದು ಹೇಳುವರು. ಮತ್ತೆ ಕೆಲವರು ಔರಂಗಾಬಾದ್ ಜಿಲ್ಲೆಯ ಆಪೆಗಾಂವ ಎಂಬಲ್ಲಿ ಜನಿಸಿದನೆಂದು ಹೇಳುವರು. ಅಂತೆಯೆ ಅವನು ಹುಟ್ಟಿದವರ್ಷ 1271 ಅಥವಾ 1275 ಎಂಬುದು ನಿರ್ಣಯವಾಗಿಲ್ಲ. ಅವುಗಳಲ್ಲಿ ಮೊದಲನೆಯದು ಅವನು 25 ವರ್ಷ ಬದುಕಿದ್ದನೆಂದೂ, ಎರಡನೆಯದು 21 ವರ್ಷ ಬದುಕಿದ್ದ ಎಂಬುದನ್ನು ಸೂಚಿಸುತ್ತವೆ. ಜ್ಞಾನದೇವ ತನ್ನ ಮಹತ್ವದ ಕೃತಿ ಜ್ಞಾನೇಶ್ವರಿಯನ್ನು ಪೂರ್ಣಗೊಳಿಸಿದ ವರ್ಷ 1290 ಆಗ ಅವನಿಗೆ ಮೊದಲನೆಯ ನಿರ್ಣಯ ಪ್ರಕಾರ ಕೇವಲ 19 ವರ್ಷವಾಗುತ್ತದೆ. ಎರಡನೆಯವರ ಪ್ರಕಾರ ಕೇವಲ 15 ವರ್ಷವಾಗುತ್ತದೆ ಪೂರ್ವಜನ್ಮದ ಸಂಸ್ಕಾರವಿಲ್ಲದೆ ಅತಿಚಿಕ್ಕ ವಯಸ್ಸಿನಲ್ಲಿ (19 ಅಥವಾ 15) ಜ್ಞಾನೇಶ್ವರಿಯಂತಹ ಉದ್ದಾಮ ತಾತ್ತ್ವಿಕ ಕೃತಿಯನ್ನು ಬರೆಯಲು ಅಸಾಧ್ಯ. ಈ ಅಭಿಪ್ರಾಯವನ್ನು ಬಲಪಡಿಸುವ ಉಕ್ತಿಯೊಂದು ಜ್ಞಾನೇಶ್ವರೀಯಲ್ಲೇ ಸಿಗುತ್ತದೆ "ಒಬ್ಬ ಯೋಗಿಗೆ ಜೈವಿಕ ಪಕ್ವತೆ ಬರದಿದ್ದರೂ ಅವನ ಸರ್ವಜ್ಞತ್ವ ಅಥವಾ ಸಂಪೂರ್ಣ ಆಧ್ಯಾತ್ಮಿಕ ಪ್ರಜ್ಞೆ ಪಡೆಯಬಲ್ಲ" (ಜ್ಞಾನೇಶ್ವರೀ 6.451, ಪು.141) ಇವಿಷ್ಟು ವಿಷಯಗಳನ್ನು ಬಿಟ್ಟರೆ ಜ್ಞಾನದೇವನ ಬಗೆಗೆ ಹೆಚ್ಚಿನ ಮಾಹಿತಿ ಸಿಗುವುದಿಲ್ಲ. ಆದುದರಿಂದ ಅವನ ಬಗೆಗಿನ ಜನನ ವರ್ಷಗಳು (1271ಅಥವಾ 1275) ಕೇವಲ ಕಾಲ್ಪನಿಕ ಎಂಬುದಾಗಿ ಹೇಳಬಹುದು. ಅವನ ಜೀವನ ಚಿತ್ರಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳು ಕಾಲದ ಗರ್ಭದಲ್ಲೇ ಅಡಗಿಹೋಗಿವೆ

ಜ್ಞಾನದೇವನಿಗೆ ಅಣ್ಣ ನಿವೃತ್ತಿಯೇ ಪರಮ ಗುರು. ಅವನು ನಾಥ ಸಂಪ್ರದಾಯದಲ್ಲಿ ನಾಲ್ಕನೆಯವನಾದ ಗಹಿನಿನಾಥ ಎಂಬುವರ ಶಿಷ್ಯ. ಪಂಢರಪುರದ ಭಕ್ತಿಪಂಥದ ನಿಷ್ಠಾವಂತ ಅನುಯಾಯಿ ನಾಮದೇವನ ಕಡೆಯಿಂದ ಜ್ಞಾನದೇವನಿಗೆ ಆಧ್ಯಾತ್ಮಿಕ ಪ್ರಚೋದನೆ, ಪ್ರಭಾವ ಉಂಟಾದುವು. ಹೀಗಾಗಿ ಅವನ ಆಧ್ಯಾತ್ಮಿಕ ಜೀವನದಲ್ಲಿ ಎರಡು ಬಗೆಯ ಆಲೋಚನಾ ಪ್ರವಾಹಗಳು ಹರಿದವು; 1. ನಾಥ ಸಂಪ್ರದಾಯದ ಯೋಗ; 2. ಭಾಗವತ ಧರ್ಮದ ಭಕ್ತಿ. ಇವೆರಡನ್ನೂ ಮೈಗೂಡಿಸಿಕೊಂಡ ಜ್ಞಾನದೇವ ಅವನ್ನು ಅದ್ವೈತ-ಭಕ್ತಿ ಎಂಬುದಾಗಿ ಸಂಯೋಜಿಸಿ, ತನ್ನೆಲ್ಲ ಕೃತಿಗಳಲ್ಲೂ ಅದನ್ನೇ ಅಭಿವ್ಯಕ್ತಿಸಿದ

ಜ್ಞಾನದೇವನ ಕೃತಿಗಳು ನಾಲ್ಕು, 1. ಜ್ಞಾನೇಶ್ವರೀ ಎಂಬುದಾಗಿಯೂ ಹೆಸರು ಪಡೆದ ಭಾವಾರ್ಥ ದೀಪಿಕಾ (ಭಗವದ್ಗೀತೆಯ ವ್ಯಾಖ್ಯಾನ) 2. ಅಮೃತಾನುಭವ –(ತಾತ್ವಿಕ ಚಿಂತನೆ) 3 ಚಾಂಗದೇವ – ಪಾಸಷ್ಟೀ (ಚಾಂಗದೇವ ಯೋಗಿಯನ್ನು ಕುರಿತು 65 ಚೌಪದಿಗಳು) 4 ಗಾಥಾ ಭಕ್ತಿಗೀತೆಗಳು –(ಅಭಂಗಗಳು) ಜ್ಞಾನದೇವನ ಹೆಸರಿನವನೇ ಆದ ಮತ್ತೊಬ್ಬ ಈ ಗಾಥಾಗಳನ್ನು ರಚಿಸಿರಬಹುದೇ ? ಎಂಬ ಪ್ರಶ್ನೆ ಎತ್ತಿದ್ದಾರೆ, ಶ್ರೀ ಎಸ್ ಎ. ಭರಡೆ (ಭರದ್ವಾಜ) ಅವರು.

ಜ್ಞಾನದೇವ ಒಬ್ಬ ಶ್ರೇಷ್ಠ ಕವಿ,ಶ್ರೇಷ್ಠ ವ್ಯಾಖ್ಯಾನಕಾರ ಎಂಬುದಾಗಿ ಹೆಸರು ತಂದುಕೊಟ್ಟ ಕೃತಿ ಜ್ಞಾನೇಶ್ವರೀ. (1290) ಇದು ಸುಮಾರು 9000 ಪದ್ಯಪಂಕ್ತಿಗಳನ್ನೊಳಗೊಂಡ ಮಹಾನ್ ಕೃತಿ ಓವೀ ಛಂದಸ್ಸಿನಲ್ಲಿ ರಚಿತವಾಗಿದೆ. ತತ್ತ್ವ, ಕಾವ್ಯ ಮತ್ತು ಯೋಗರಹಸ್ಯಗಳಿಂದ ಮುಪ್ಪುರಿಗೊಂಡು ಅನನ್ಯವಾಗಿದೆ. ಏಳು ಶತಮಾನಗಳು ಉರುಳಿದರೂ ಈ ಕೃತಿಯ ಕಾಂತಿ ಕುಗ್ಗಿಲ್ಲ. ಜನಪ್ರಿಯತೆ ಕಡಿಮೆಯಾಗಿಲ್ಲ, ಆಧ್ಯಾತ್ಮಿಕ ಮನೋಭಾವವುಳ್ಳ ಎಲ್ಲರೂ ಜ್ಞಾನೇಶ್ವರಿಯನ್ನು ಓದುವರು. "ಶ್ರೀ ಕೃಷ್ಣನ ಭಗವದ್ಗೀತೆಯು ಮರಾಠಿಯಲ್ಲಿ ಜ್ಞಾನೇಶ್ವರಿಯಾಗಿ ಬಂದು, ಅಂದಿನ ಜನದಿಂದ ಇಂದಿನ ವಿನೋಬಾಜಿಯವರವರೆಗೂ ಮಹಾರಾಷ್ಟ್ರದ ಅಂತಃಕರಣವನ್ನು ತೊಳೆಯುತ್ತಲೇ ಇದೆ". (ಡಾ॥. ದ ರಾ. ಬೇಂದ್ರೆ, ಮಹಾರಾಷ್ಟ್ರ ಸಾಹಿತ್ಯ–ಪು. 14) ಈ ಕೃತಿ ಕೇವಲ ತಾತ್ತ್ವಿಕ ನಿರೂಪಣೆಯಿಂದ ಮಾತ್ರ ಮನ್ನಣೆ ಪಡೆದಿಲ್ಲ. ಕಾವ್ಯಾತ್ಮಕ ಗುಣದಿಂದಲೂ ಭಾವಪ್ರಕಾಶದಿಂದಲೂ ಯಶಸ್ಸು ಪಡೆದಿದೆ. ಜನಮನದ ಕತ್ತಲನ್ನು ಕಳೆದು ಜ್ಞಾನ ದೀವಿಗೆಯನ್ನು ತಂದುಕೊಡುವ ಅಪೂರ್ವಶಕ್ತಿ ಅದರಲ್ಲಿ ಅಡಗಿದೆ.

**ಶ್ರೀ ಆರ್. ರಾಮಕೃಷ್ಣ**

ಮೂಲವಸ್ತುವನ್ನು ಹಿಗ್ಗಿಸುವುದರಲ್ಲೂ ಕುಗ್ಗಿಸುವುದರಲ್ಲೂ ಕೃತಿಕಾರ ಜಾಣ್ಮೆಯನ್ನೂ ಸ್ವಂತಿಕೆಯನ್ನೂ ತೋರಿದ್ದಾನೆ ಉದಾಹರಣೆ:- ಗೀತೆಯ 'ಅಹಿಂಸಾ'ಎಂಬ ಪದದ ಬಗ್ಗೆ ಜ್ಞಾನೇಶ್ವರೀಯಲ್ಲಿ ನೂರಕ್ಕೂ ಹೆಚ್ಚು ಪದ್ಯ ಪಂಕ್ತಿಗಳಿವೆ (ಜ್ಞಾನೇಶ್ವರೀ, ಪು. 341, ಸಂ 217-338)

ಅಮಾನಿತ್ವಮದಂಭಿತ್ವಂ
ಅಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ
ಸ್ಥೈರ್ಯಮಾತ್ಮವಿನಿಗ್ರಹಃ ॥
(ಭಗವದ್ಗೀತೆ, ಅಧ್ಯಾಯ 1, ಶ್ಲೋಕ 7)

ಅಮಾನಿತ್ವವೂ (ತನ್ನ ಗುಣವನ್ನು ಇತರರಿಗೆ ಪ್ರಕಟಿಸದಿರುವದು), ಡಂಭವಿಲ್ಲದಿರುವುದೂ, ಅಹಿಂಸೆಯೂ, ಕ್ಷಮೆ, ಸರಳತೆ (ಆರ್ಜವ), ಆಚಾರ್ಯೋಪಾಸನೆ, ಶುಚಿಯಿಂದಿರುವಿಕೆ, ಸ್ಥೈರ್ಯವು ಇಂದ್ರಿಯ ನಿಗ್ರಹವು.

ಗೀತೆಯ ಕೊನೆಯ ಅಧ್ಯಾಯ ಕೇವಲ 78 ಶ್ಲೋಕಗಳಿಂದ ಕೂಡಿದ್ದರೆ, ಇದರಲ್ಲಿ 1800 ಕ್ಕೂ ಹೆಚ್ಚು ಪದ್ಯಗಳಿವೆ.

ಜ್ಞಾನೇಶ್ವರೀ ಕೃತಿಯನ್ನು ಪೂರ್ಣಗೊಳಿಸಿದ ತರುವಾಯ, ಕಾಶಿ ನಗರದ ವಿದ್ವತ್ಸಭೆಯ ಮುಂದೆ ಪರಿಸಲಾಯಿತು. ಈ ಕೃತಿಯಲ್ಲಿ ಪ್ರತಿಪಾದಿತವಾಗಿದ್ದ ತಾತ್ತ್ವಿಕ ದರ್ಶನವನ್ನೂ, ಮರಾಠೀ ಭಾಷಾ ವೈಭವವನ್ನೂ ಕಂಡು ಸಭೆಯಲ್ಲಿದ್ದ ಪಂಡಿತರು ಅನಕ್ಕಾದರು. ಜ್ಞಾನದೇವನ ತಾತ್ತ್ವಿಕ ಜ್ಞಾನ, ಕಾವ್ಯಶಕ್ತಿ ಜನಜನಿತವಾಯಿತು ಅನೇಕರು ಅವನ ಶಿಷ್ಯರಾಗಲು ಮುಂದೆ ಬಂದರು. ಊರಿಗೆ ಹಿಂದಿರುಗಿದ ತರುವಾಯ ಜ್ಞಾನದೇವ ಭಕ್ತಿ ಪ್ರಧಾನವಾದ 'ವಾರಕರಿ ಪಂಥ' ಸ್ಥಾಪಿಸಿದ ಪಂಢರಿಪುರದ ವಿಠೋಬನೇ ಅವನ ಆರಾಧನಾ ಮೂರ್ತಿ. ತುಳಸೀ ಮಾಲಾಧಾರಣ, ಮುದ್ರಾ ಧಾರಣ, ಶ್ರೀಗಂಧಲೇಪನ, ಏಕಾದಶೀ ವ್ರತ-ಈ ಪಂಥದ ಸಂಕೇತಗಳಾದವು. ಜ್ಞಾನೇಶ್ವರೀ ಕೃತಿಯು ಈ ಪಂಥದ ಪರಮಪೂಜ್ಯ ಗ್ರಂಥ ವಾಯಿತು. ಅಲ್ಲದೇ ಮೌಳಿ (ತಾಯಿ) ಎಂಬ ಹೆಸರನ್ನೂ ಪಡೆಯಿತು. ಈ ಕೃತಿ ತನ್ನ ಆತಂಕ ಮತ್ತು ಬಾಹ್ಯಗುಣಗಳಿಂದ ಪ್ರಪಂಚದ ಸಾಹಿತ್ಯ ರಾಶಿಯಲ್ಲಿ ಉನ್ನತ ಸ್ಥಾನ ಪಡೆದಿದೆ ಎಂಬುದಾಗಿ ಭಾವಿಸಿರುವವರುಂಟು. ವಿಷಯ ಪ್ರತಿಪಾದನೆಯಲ್ಲಿ ಕ್ರಮಬದ್ಧತೆ, ಪದಮೈತ್ರಿ, ಶಬ್ದಾರ್ಥಜೋಡಣೆ, ಸಂಭಾಷಣೆ, ಸರಳತೆ, ಯುಕ್ತ ಉದಾರಣೆಗಳು- ಇವು ಜ್ಞಾನೇಶ್ವರೀ ಕೃತಿಯ ಪ್ರಧಾನ ಅಂಶಗಳು ಅದರ ಅನೇಕ ಪದಪುಂಜಗಳೂ ಉಕ್ತಿಗಳೂ ಜನಜನಿತವಾಗಿದೆ. ಸನ್ಮಾರ್ಗದಲ್ಲಿ ನಡೆಯಲು ಪ್ರೇರೇಪಿಸಿವೆ.

> ಜ್ಞಾನದೇವನು ರಚಿಸಿರುವ ವಿರಹಗೀತೆಗಳು ಬಿಂಬಿಸುವ ಕಾವ್ಯಾತ್ಮಕ ಅಂಶಗಳು ಓದುಗರ ಮನವನ್ನು ಕರಗಿಸಿ ನೀರಾಗಿಸುತ್ತವೆ. ಭಗವಂತನ ದರ್ಶನಕ್ಕಾಗಿ ಅವನ ಪ್ರೇಮ ಸಾನ್ನಿಧ್ಯಕ್ಕಾಗಿ ತೀವ್ರವಾಗಿ ಪರಿತಪಿಸುತ್ತಿರುವ ವಿರಹಿಣಿಯೊಬ್ಬಳ (ಜೀವಾತ್ಮ) ಚಿತ್ರವಿದು.
>
> ಮೋಡ ಗುಡುಗುತಿದೆ, ಗಾಳಿ ಭೋರ್ಗರೆಯುತಿದೆ
> ಚಂದಿರ, ಚಂಪಕ ತಮ್ಮ ಉಪಶಮನ ಶಕ್ತಿಯನ್ನು (ತಂಪು ಕಂಪನ್ನು)
> ಕಳೆದುಕೊಂಡಿರುವರು
> ತೇಯ್ದು ಲೇಪಿಸಿದ ಶ್ರೀಗಂಧವೂ ದೈಹಿಕ ಯಾತನೆಯನ್ನೀಯುತಿದೆ
> ಹೂವಿನ ಹಾಸಿಗೆ ತಂಪನ್ನೀಯುವುದೆಂದು ಹೇಳುವರು
> ಆದರೂ ಅದು ಕುಲುಮೆಕೆಂಡದಂತೆ ನನ್ನನ್ನು ದಹಿಸುತಿದೆ
> ಕೋಗಿಲೆ ಮಧುರಗಾನದಲಿ ಹಾಡುವುದು ಎಂಬುದು ಮನೆಮಾತು
> ಆದರೆ ನನ್ನ ವಿಷಯದಲ್ಲಿ ಅದರ ಗಾನ ವಿರಹಗೀತೆಯಾಗಿದೆ
> (ಕೋಗಿಲೆಯ ಮಧುರಗಾನವೂ ನನಗೆ ವಿರಹಗೀತೆಯಾಗಿದೆ ಎಂಬ ಭಾವ)
> ಕನ್ನಡಿಯನು ನೋಡಿದಾಗ, ಅದರಲ್ಲಿ ನನ್ನ ಮುಖಕಮಲವನ್ನು ನೋಡಲೂ
> ಅಸಮರ್ಥಳಾಗಿರುವೆ
> ಈ ಅವಸ್ಥೆಗೆ ದೇವರು ನನ್ನನ್ನು ಒಳಪಡಿಸಿದ್ದಾನೆ.
>
> (ಜ್ಞಾನದೇವ ಗಾಥಾ, ಪು. 100, ಸಂ. 664)

ಅಮೃತಾನುಭವ ಎಂಬುದು ಒಂದು ಪಾಂಡಿತ್ಯ ಪೂರ್ಣವಾದ ಒಂದು ಗ್ರಂಥ, ಜಿಜ್ಞಾಸಾಪ್ರಧಾನವಾದದ್ದು. ಜೀವಾತ್ಮ ಪರಮಾತ್ಮರನ್ನು ಕುರಿತ ದಾರ್ಶನಿಕ ಚಿಂತನೆ ಇದರಲ್ಲಿ ಹರಿದಿದೆ. ಈ ಕೃತಿಯ ಶೈಲಿ ಬಲು ಕಠಿಣವಾಗಿರುವುದರಿಂದ ಅರ್ಥಮಾಡಿಕೊಳ್ಳುವುದು ತುಂಬ ಕಷ್ಟ. ಆದುದರಿಂದ ಉತ್ತಮ ಕೃತಿಯಾದರೂ ಜನಪ್ರಿಯವಾಗದೆ ಹೋಯಿತು "ಈ ಗ್ರಂಥವೆಂದರೆ ಶುದ್ಧ ರಸಾಯನವಾಗಿದೆ. ಅದರಲ್ಲಿ ಸಕ್ಕರೆಯೂ ಇಲ್ಲ ಮತ್ತು ಅದಕ್ಕೆ ಅನುಪಾನವೂ ಇಲ್ಲ" ಎಂಬುದಾಗಿ ಶ್ರೀ ವಿನಾಯಕ ಲಕ್ಷ್ಮಣಭಾವೆ ಅಭಿಪ್ರಾಯಪಟ್ಟಿದ್ದಾರೆ. (ಮಹಾರಾಷ್ಟ್ರ ಸಾರಸ್ವತ-ಪು.117) ಈ ಕೃತಿಯನ್ನು ಸಂಸ್ಕೃತಕ್ಕೂ ಅನುವಾದ ಮಾಡಲಾಗಿದೆ. "ಸೂರ್ಯ ತನ್ನ ಸ್ವಂತಕ್ಕೋಸ್ಕರವಲ್ಲದೆ ಪ್ರಪಂಚದ ಜೀವರಾಶಿಗಳಿಗೆಲ್ಲಾ ಹರಡಲು ಬೆಳಕನ್ನು ಹೊಂದಿದ್ದಾನೆ. ಅಂತೆಯೇ ತನ್ನ ಸ್ವಸಂತೋಷಕ್ಕೆ ಮಾತ್ರವಲ್ಲದೆ ಗುರುವಿನ ಆಜ್ಞೆಯಿಂದಾಗಿಯೇ ಎಲ್ಲ ಜನರಲ್ಲೂ ಧಾರ್ಮಿಕ ಮನೋಭಾವನ್ನು ಉಂಟುಮಾಡಲು ಈ ಕೃತಿಯನ್ನು ರಚಿಸಿದ್ದೇನೆ". ಎಂಬುದಾಗಿ ಜ್ಞಾನದೇವ ಹೇಳಿಕೊಂಡಿದ್ದಾನೆ. (ಅಮೃತಾನುಭವ 10.1-1)

ಚಾಂಗದೇವ ಪಾಸಷ್ಠೀ ಎಂಬ ಕೃತಿಯಲ್ಲಿ ಭಗವಂತ, ಭಕ್ತಿ, ಅರ್ಪಣಾಭಾವ ಹಲವು ಮುಂತಾದ ವಿಚಾರಗಳು ಸಮರ್ಥವಾಗಿ ಮೂಡಿಬಂದಿವೆ. ತನ್ನ ಮತ್ತು ಭಗವಂತನ ಅಸ್ತಿತ್ವ ಕುರಿತು ಅವನು ಹೇಳಿರುವ ಮಾತಿದು :

"ಜ್ಞಾನದೇವ ಮತ್ತು ಚಕ್ರಪಾಣಿ ಇಬ್ಬರೂ ಕಣ್ಣುಗಳ್ಳುಳ್ಳ ಎರಡು ಕನ್ನಡಿಗಳಂತೆ, ಪರಸ್ಪರ ವೀಕ್ಷಿಸಿದಾಗ ತಮ್ಮ ದ್ವಿತ್ವವನ್ನು ಕಳೆದುಕೊಳ್ಳುವರು."

(ಎರಡು ದೇಹವಿದ್ದರೂ ಒಂದೇ ಪ್ರಾಣ ಒಂದೇ ನೋಟ ಎಂಬ ಭಾವ)-(ಚಾಂಗದೇವ ಪಾಸಷ್ಠೀ, ಸಂ॥ ವಿ ಎನ್. ಸಖರೆ, ಎಸ್ 1837, ಸಂ.62)

ಗಾಥಗಳು (ಅಭಂಗಗಳು) ಮುಖ್ಯವಾಗಿ ಭಕ್ತಿಪ್ರಧಾನ ಗೀತೆಗಳು ಅವು ಸಮಾಜದ ಅರ್ಥಹೀನ ಆಚಾರಗಳನ್ನೂ ಅನೈತಿಕ ನಡವಳಿಕೆಗಳನ್ನು ವಿಡಂಬಿಸುವುವೇ ಆದರೂ ಅವುಗಳ ಮುಖ್ಯ ಗುರಿ ಪರಮಾತ್ಮನಿಗಾಗಿ ಹಾತೊರೆಯುವ ಜೀವಾತ್ಮದ ಪರಿಯನ್ನು ಹೇಳುವುದೇ ಆಗಿದೆ.

ಈ ಮಾಧ್ಯಮದಲ್ಲಿ ಅತ್ಯಂತ ಶಕ್ತಿಯುತವಾಗಿ ಕಾವ್ಯಾತ್ಮಕವಾಗಿ ಕೃತಿ ರಚಿಸಿದ ಮೊತ್ತಮೊದಲು ಮರಾಠೀ ಕವಿ ಎಂದರೆ ಜ್ಞಾನದೇವನೇ. ಜನರಲ್ಲಿ

(34 ನೇ ಪುಟ ನೋಡಿ)

# ಕನಕದಾಸರು ಕಂಡ ಸಮಾಜ

ಹರಿದಾಸರು ಪ್ರತಿಭಾವಂತ ಅನುಭಾವಿ ಕವಿಗಳು. ಅವರಲ್ಲಿ ಸ್ಫೂರ್ತಿಯ ಸೆಲೆಯೊಡೆದಾಗಲೆಲ್ಲ ಕಾವ್ಯದ ಬುಗ್ಗೆ ಚಿಮ್ಮುತ್ತಿತ್ತು. ಕೂತಲ್ಲಿ ನಿಂತಲ್ಲಿ ಅವರು ಹಾಡುಕಟ್ಟಿ ಹೇಳುತ್ತಿದ್ದರು. ಕನಕದಾಸರು ಅಂತಹ ಒಬ್ಬ ಸಂತ ಕವಿ ಅವರ ಹಾಡುಗಳು ಹೆಚ್ಚಾಗಿ ಬಾಯಿಂದ ಬಾಯಿಗೆ ಬಂದವು. ಕೆಲವನ್ನು ಅವರ ಶಿಷ್ಯರೋ ಇತರರೋ ಬರೆದಿಟ್ಟರು. ಕಣ್ಮರೆಯಾಗಿ ಹೋದವೆಷ್ಟೋ. ಅವರ ಕೀರ್ತನೆಗಳು ಇಂತಿಷ್ಟು ಎಂದು ಹೇಳುವುದು ಕಷ್ಟ. ಅಚ್ಚಾದ ಸಂಕಲನಗಳಲ್ಲೂ ಕೀರ್ತನೆಗಳು ಏಕರೂಪವಾಗಿಲ್ಲ (ಇಲ್ಲಿ ಅಧ್ಯಯನಕ್ಕಾಗಿ ಬೆಟಗೇರಿ ಕೃಷ್ಣಶರ್ಮ ಮತ್ತು ಸಂಗೇನಿ ಕೃಷ್ಣರಾವ್ ಅವರ ಸಂಕಲನವನ್ನು ಸ್ವೀಕರಿಸಿದೆ) ಕನಕರ ಕೀರ್ತನೆಗಳಲ್ಲಿ ಸಮಾಜದ ಬಗೆಗಿನ ಅವರ ಕಳಕಳಿ ವ್ಯಕ್ತವಾಗುತ್ತದೆ.

ಸಾಹಿತ್ಯವೆಂದರೆ ಜೀವನ ದರ್ಶನ. ಸಮಾಜದ ಪ್ರತಿಬಿಂಬ. ಕನಕದಾಸರು ಅಳರಸರಾಗಿ, ಯೋಧರಾಗಿ, ಸಂಸಾರಿಗಳಾಗಿ, ಸನ್ಯಾಸಿಗಳಾಗಿ, ಶಿಷ್ಯರಾಗಿ, ಭಕ್ತರಾಗಿ -ಹೀಗೆ ನಾನಾರೀತಿಯಲ್ಲಿ ಪಡೆದ ಅನುಭವಗಳು ಕಾವ್ಯಾತ್ಮಕ ಹಾಡುಗಳಾಗಿ ಹೊಮ್ಮಿವೆ. ಅವರು ಓಡಾಡಿದ ಮಣ್ಣಿನ ವಾಸನೆ ಹಾಡುಗಳಲ್ಲಿ ಘಮಘಮಿಸುತ್ತಿದೆ. ಸಮಾಜದ ಕೆಡಕುಗಳನ್ನು ಕಟುವಾಗಿ ವಿಮರ್ಶಿಸಿ, ಡಂಭಾಚಾರವನ್ನು ಖಂಡಿಸಿ, ದುರಾಚಾರ ಅಜ್ಞಾನಗಳನ್ನು ಎತ್ತಿತೋರಿಸಿ, ಸದಾಚಾರವನ್ನು ಸನ್ಮಾರ್ಗವನ್ನು ಬೋಧಿಸಿದ್ದಾರೆ. ಸಮಾಜವನ್ನು ತಿದ್ದಿ ಏಳಿಗೆಯನ್ನು ಸಾಧಿಸುವುದೇ ಅವರ ಕೀರ್ತನೆಗಳ ಗುರಿ

## ಸಂಸಾರ

ಸಂಸಾರ ಜೀವನದಲ್ಲಿ ಹಲವು ಕಷ್ಟಗಳನ್ನೆದುರಿಸಿದ ಅವರು,ಸಂಸಾರ–ಈ ಜನ್ಮ ಹೇಯ "ಹೇಸಿಕೆಯೊಳಿದನ ಸಂಸಾರವೆಂಬುದು ಮಾಯಪಾಶ"–(ಕೀ. 8) ಕರ್ಮಫಲ ಬಿಡಲರಿಯದು– ಎಂದು ಅದರ ಬಗ್ಗೆ ನಿರಾಸಕ್ತರಾಗಿ "ಆದಿಕೇಶವರಾಯ ಕೊಟ್ಟವರಿಗುಂಟು, ಕೊಡದವರಿಗಿಲ್ಲ" (111) ಎಂದು ದೈವವಾದಿಗಳಾಗುತ್ತಾರೆ. ದೇಹವು ಮಲಮೂತ್ರವಾಸನೆಯ ಗುಡಾರ, ಇದೊಂದು ಕೊಂಪೆ (10) ಎಂದು ಅದಕ್ಕೆ ಹೇಸಿ "ಪಥ ನಡೆಯದಯ್ಯ ಪರಲೋಕಕ್ಕೈದುವೊಡೆ ಮನ್ಮಥನೆಂಬ ಖಳನು ಮಾರ್ಗವ ಕಟ್ಟಿ ಸಾರಿಯುತಿರೆ (9) ಎಂದು ಕಾಮವನ್ನು ನಿಂದಿಸುತ್ತಾರೆ. ಮೋಕ್ಷಕ್ಕೆ ಅದು ಅಡಚಣೆ ಎನ್ನುತ್ತಾರೆ. ವನಿತೆಯ ಕಾಯ ಕಾಂತಿಯೂ ಅವರಿಗೆ ಆಕರ್ಷಕವಲ್ಲ ಮನುಷ್ಯ ಈ ಮೋಹಪಾಶದಲ್ಲಿ ಸಿಲುಕಿ 'ಬಂದಿರುವುದೆಲ್ಲ ತಾ ತಂದ ಸತಿಸುತರೆಲ್ಲ' (13) ಎಂದು ತಿಳಿಯದೆ ಭ್ರಮಿಸುತ್ತಾನೆ. ಸಂಸಾರಿಯಾಗಿದ್ದ ಸನ್ಯಾಸಿಯ ಈ ಮಾತು ವಿಚಾರಾರ್ಹ. ಸಂಸಾರವನ್ನು ಅವರು ಖಂಡಿಸಿರುವುದು ಅದರಲ್ಲೇ ಮೈಮರೆತಿರಬಾರದು ಎಂಬುದಕ್ಕಾಗಿ ಮಾತ್ರ, ಸಂಸಾರವೇ ಬೇಡವೆಂದಾದರೆ ಅಸ್ತಿತ್ವವೇ ಅಸಾಧ್ಯ. "ಸುತಲಾಭದಿಂದ ಅಧಿಕಲಾಭವುಂಟೆ? "(125) ಎಂಬ ಅವರ ಮಾತಿನಲ್ಲಿ ಸತಿಸುತರು, ಸಂಸಾರ ಬೇಕೆಂಬುದು ಸ್ಪಷ್ಟ. ಹಾಗಿದ್ದರೆ ಸಂಸಾರ ಬೇಕು ಬೇಡ ಎಂಬ ವೈರುಧ್ಯ ಅವರದೇ ಮಾತಿನಲ್ಲಿ ಕಾಣುತ್ತದಲ್ಲಾ? ಅಂದರೆ ಸಂಸಾರದಲ್ಲೇ ಮೈಮರೆತು ಅದಕ್ಕಿಂತ ಮೇಲಿನದನ್ನು ಮರೆಯಬಾರದೆಂಬುದೇ ಅವರ ಆಶಯ "ಮರುಳಾಗದಿರು ನೋಡಿ ಪರಸತಿಯರ" (127) ಎಂದು ಇಂದ್ರ, ಕೀಚಕ, ರಾವಣರನ್ನು ಉದಹರಿಸಿದ್ದಾರೆ. "ಮಕ್ಕಳಿಲ್ಲದ ತಾಯಿ ಕೊಳೆತ ತೆಂಗಿನಕಾಯಿ, ಮಕ್ಕಳ ಪಡೆವುದು ಪುಣ್ಯ" ಎಂದು ಸಂಸಾರವನ್ನು ಸಮರ್ಥಿಸಿದ್ದಾರೆ ಮಕ್ಕಳಾಗದಿದ್ದವರು ಅದಕ್ಕಾಗಿ ಹಂಬಲಿಸುವುದನ್ನು ಕಂಡು "ಮಗನಿಂದ ಗತಿಯುಂಟೆ ಜಗದೊಳು ನಿಗಮಾರ್ಥಸಾರ ವಿಚಾರದಿಂದಲ್ಲದೆ." ಎಂದು ಸಮಾಧಾನ ಹೇಳುತ್ತಾರೆ. ಮಕ್ಕಳಿಲ್ಲದಿದ್ದರೇನು ಸತ್ಯ, ಶಾಂತಿ, ಸಮಚಿತ್ತ, ದುರ್ವೃತ್ತಿನಿಗ್ರಹ ಎಂಬ ನಾಲ್ಕು ಮಕ್ಕಳಿದ್ದರೆ ಹೆತ್ತರೇನು ಹೆರದಿದ್ದರೇನು (145) ಎಂದು ಕೇಳುತ್ತಾರೆ. 'ಹೆತ್ತ ತಾಯಿಗಿಂತ ಮಿಗಿಲಿಲ್ಲ' ಎಂದು ತಾಯಿ ಶ್ರೇಷ್ಠತೆಯನ್ನು ಸಾರುತ್ತಾರೆ.

ಲೆತ್ತ, ಚದುರಂಗ, ಪಗಡೆಯಾಟದ ವ್ಯಸನಕ್ಕೆ ಬಲಿಬಿದ್ದು ಅಸ್ತಮಾನವಾದರೂ ಏಳದಿರುವುದು, ಏಕಾದಶಿವ್ರತ ಮಾಡದೆ ನಿಡುನಿದ್ರೆ ಮಾಡುವುದು, ಉತ್ತಮರು ಬಂದರೆ ಎದ್ದು ನಮಸ್ಕರಿಸದಿರುವುದು, ಮರಳು ಬುದ್ಧಿ (11), 'ಉತ್ತಮಜನರು ಸುರೆಯ ನೀಂಟುವರ' (16) ಎಂದು ಕೆಟ್ಟ ಚಾಳಿಗಳನ್ನು ಕಂಡ ಕನಕರು ಸಿಡಿದೇಳುತ್ತಾರೆ.

## ನೀತಿ ಬೋಧೆ

ಇದು ಕೀರ್ತನೆಗಳ ಬಹು ಅಂಶ. ಕೆಟ್ಟದ್ದನ್ನು ನಿಷೇಧಿಸಿ ಒಳ್ಳೆಯದನ್ನು ಬೋಧಿಸಿ ಸಮಾಜವನ್ನು ಉದ್ಧರಿಸುವುದೇ ಅವರ ಧ್ಯೇಯ. "ಏನೂ ಇಲ್ಲದ ಎರಡು ದಿನದ ಸಂಸಾರ" ಇದು ಎಲ್ಲವೂ ಪರಮಾತ್ಮನದ್ದೆಂದು ತಿಳಿದು ಬದುಕಿರುವಾಗ ಇತರರಿಗೆ ಬೇಕಾದವನಾಗಿ ಬಾಳಬೇಕು ಭಾಷೆ ಕೊಟ್ಟ ಬಳಿಕ ನಿಜವಿರಬೇಕು. ಕಳ್ಳತನಬೇಡ, ಕೆಟ್ಟ ನುಡಿಯಬೇಡ, ಪರಸತಿಯ ನೋಡಬೇಡ, ಉಳ್ಳವನೆಂದು ಉಬ್ಬಬೇಡ, ದೊರೆತನ ಬಂದಾಗ ಕೆಟ್ಟ ನುಡಿಯಬೇಡ, ಪರಸತಿಯನ್ನು ನೋಡಬೇಡ, ದುರ್ಜನರನ್ನು ಕೂಡಬೇಡ, ಗರ್ವದಿಂದ ಮಾತಾಡಬೇಡ, ಕೈಹಿಂದೆಗೆವ ಲೋಭಿಯನ್ನು ಬೇಡಬೇಡ– ಎಂಬ ಅವರ ಬೋಧನೆ ಮಾರ್ಗದರ್ಶನ ಸೂತ್ರ ಸತ್ತುಹೋದ ಮೇಲೆ ಮತ್ತೆ ನಿಮ್ಮ ಅರ್ಥ ಯಾರಿಗೋ ಏನೋ, ಆದ್ದರಿಂದ ಲೋಭಿಯಾಗದೆ ಹಸಿದು ಬಂದವರಿಗೆ ಅಶನವೀಯಬೇಕು (114) "ದುರ್ಜನರ ಸಂಗವನೊಲ್ಲೆ ಸಜ್ಜನರ ಸಂಗದೊಳಿರಿಸೆನ್ನ (119) ಎಂದು ಯಾರು ಯಾರು ದುರ್ಜನರೆಂಬ ಪಟ್ಟಿಯನ್ನೇ ಕೊಟ್ಟು, ಅವಿನೀತ ಪುತ್ರ,ವಿಶ್ವಾಸಘಾತಕಿ, ವಿಷಯಲಂಪಟ, ಲೋಭಿಗಳನ್ನು ನಿಂದಿಸುತ್ತಾರೆ. "ಸತ್ಯವಂತರ ಸಂಗವಿದ್ದರೆ ತೀರ್ಥವೇತಕೆ? ಸನ್ನೆಯರಿತು ನಡೆಯದಂಥ ಸತಿಯುದ್ದೇತಕೆ? (124) ಎಂದು ಸತಿಯು ಪತಿಗೆ ಅನುಕೂಲವಾಗಿರಬೇಕೆಂಬ ಸುಖ ದಾಂಪತ್ಯದ ಗುಟ್ಟನ್ನು ಹೊರಗೆಡುತ್ತಾರೆ. ಗಂಡ,ಹೆಂಡತಿ, ಅರಸು, ತಾಯಿ, ಭೃತ್ಯ, ನಂಟ, ಬಂಟ-ಹೇಗಿರಬೇಕೆಂದು ಬೋಧಿಸುತ್ತಾರೆ.(131) "ಪರನಿಂದೆಗಿಂತ ಪಾಪವುಂಟೆ ? (125) ಎಂದು ಕೇಳುತ್ತಾರೆ, ಧನಲಾಭದಿಂದ ಅಧಿಕಲಾಭವುಂಟೆ? ಎಂದು ಕೇಳಿದ ಅದೇ ಹಾಡಿನಲ್ಲಿ "ವಿತ್ತವನರಸುವಂಗೆ ಮುಕ್ತಿಯುಂಟೆ? ಎಂದು ಕೇಳಿರುವುದು ವಿರೋಧಾಭಾಸನಾಗಿ ಕಾಣಬಹುದಾದರೂ ಹಣ ಜೀವನಕ್ಕೆ ಬೇಕು, ಅದರ ಸಂಪಾದನೆಯೇ ಜೀವನದ ಗುರಿಯಾಗಿ ಸದ್ವಿನಿಯೋಗ ಮಾಡದೆ, ಅದಕ್ಕಿಂತ ಮೇಲಿನದನ್ನು ಮರೆಯಬಾರದು ಎಂದು ತಿಳಿದರೆ ವಿರೋಧ ಪರಿಹಾರವಾಗುತ್ತದೆ.

ಡಾ॥ ಯು. ರಾಮಭಟ್ಟ

ಕನಕದಾಸರು ಕಲಿಕಾಲದ ಅಂದರೆ ನಾವು ಜೀವಿಸುವ ಈ ಕಾಲದ ನೀತಿನಡತೆಗಳ ವೈಪರೀತ್ಯಗಳನ್ನು ನೋಡಿದ್ದಾರೆ– ಸೊಸೆಯೇ ಅತ್ತೆಯಂತೆ, ಮಗನೇ ತಂದೆಯಂತೆ, ಹೆಂಡತಿಯೇ ಗಂಡನಂತೆ ವರ್ತಿಸುತ್ತಾರೆ. ಒಲಿದ ಹೆಂಡತಿಯನ್ನು ಬಿಟ್ಟು ಸೂಳೆಯರನ್ನು ನಂಬುವುದು, ಆಳಿದೊಡೆಯನಿಗೆ ಎರಡೆಣಿಸುವುದು.–ಅಂಥವರಿಗೆ ಮಾಳಿಗೆಮನೆ, ದನ ಧಾನ್ಯಸಂಪತ್ತು ಸಮೃದ್ಧಿ. ಪತಿವ್ರತೆಯರಿಂಬುವರು ಶತಸಹಸ್ರದಲೊಂದು, ನಿತ್ಯದಕಳವು ವ್ಯಭಿಚಾರವುಳ್ಳವರೆಲ್ಲ ಅರ್ಥಸಂಪನ್ನರು, ವೇದವಿಪ್ರರು ವೃತ್ತಿ ಸ್ವಾಸ್ತ್ಯವನ್ನು ಕಳೆದು ತಿರಿದು ತಿಂಬ ಉಂಡಾಡಿಗಳು, ಹರಿಹರಪೂಜೆ ಹಗರಣ, ಉತ್ತಮರ ಜೀವನಕ್ಕೆ ದಾರಿಯೇ ಇಲ್ಲ, ನಿತ್ಯ ಧರ್ಮಗಳೆಲ್ಲ ಎತ್ತ ಹೋದವೋ-ಈ ಕಲಿಯುಗದ ಮಹಿಮೆ ಹೇಳಲಳವಲ್ಲ ಎಂದು ಕೈ ವ ಗುಚಿ ಈ ಭೂಭಾರ ಹೆಚ್ಚಿದೆಯೆಂದು ಅಸಹ್ಯಪಡುತ್ತಾರೆ. (18) ಇಂದೂ ಇಂತಹ ವಿಪರೀತ ಉಳಿದು ಕೊಂಡಿರುವುದರಿಂದ ಕನಕರ ಮಾತು ಸತ್ಯವೆನಿಸುತ್ತದೆ ಇಂತಹ ದುರ್ನಯವನ್ನು ಕಂಡು ವ್ಯಂಗ್ಯದ ಕಟು ನುಡಿಯಿಂದ ತಿವಿಯುತ್ತಾರೆ.– ಈ ಕಾಲದಲ್ಲಿ ದಾನ ಧರ್ಮ ಬಿಟ್ಟವನೇ ಧರ್ಮಾತ್ಮ, ಸಜ್ಜನರನ್ನು ಕಾಡುವನೇ ಸತ್ಪುರುಷ, ಹಿರಿಯರನ್ನು ಬಯ್ಯುವನೇ ನಿಷ್ಠ, ದೇವರನ್ನು ಸ್ಮರಿಸುವನೇ ಅವಿಚಾರಿ (149) ಇಲ್ಲಿ ದೈವಭಕ್ತರಾದ ಅವರನ್ನು ಯಾರೋ ನಿಂದಿಸಿರಬೇಕೆಂದು ತೋರುತ್ತದೆ

## ಜಾತಿಯ ಮೇಲು ಕೀಳು

ಇದು ಇಡೀ ದೇಶಕ್ಕಂಟಿದ ಪಿಡುಗು. ಹಿಂದಿನ ಹಲವಾರು ಸಂತರು ಖಂಡಿಸಿಯೂ ಕನಕರ ಕಾಲದಲ್ಲೂ ಇದು ಪ್ರಬಲವಾಗಿತ್ತು. ಇದನ್ನು ಸ್ವತಃ ಅನುಭವಿಸಿದ ಕನಕರೂ ಕೆರಳಿದರು ಕುಲ ಕುಲ ಎಂದು ಕೂಗುತ್ತಾರಲ್ಲ? ಕುಲೀನರೆನಿಸಿದವರು ಭೋಗಿಸುವ ಹಾಲು, ಕಮಲ ಎಲ್ಲಿ ಹುಟ್ಟುತ್ತವೆ? ಮಹಾಮೇಧಾವಿ ಋಷಿಗಳೆನಿಸಿದ ಪರಾಶರ, ವಶಿಷ್ಠ ನಾರದ ಇವರ ಕುಲವೇನು? ಭಕ್ತರಾದವರಿಗೆ ಮತ್ತೇನು ಕುಲವೆಂದು ಕೇಳುತ್ತಾರೆ. (120) ಕುಲವಲ್ಲ, ಗುಣದಿಂದ ಕುಲವೆಂದು ಹಲವಾರು ಉದಾಹರಣೆಗಳಿಂದ ಸಮರ್ಥಿಸುತ್ತಾರೆ ನಾಡಾಡಿಯಾಗಿ ತಿರುಗುವ ಅವರನ್ನು ಹುಚ್ಚ ಅಂದಿದ್ದರೇನೋ!ಆದಿಕೇಶವನ ಹುಚ್ಚನಾದ ನನಗೆ ಇನ್ನೇನು ಕುಲ ಎಂದು ಕೇಳುತ್ತಾರೆ, 'ಮುಟ್ಟಬಾರದವರ ಪಾಯಸ, ದೋಟಿಗೆ ನಿಲುಕದ ಹಣ್ಣು, ದಾರಿದ್ರ್ಯ ಕೊಳ್ಳದಗದ ಅರ್ಥ, ಶರೀರ ಸೌಖ್ಯ ಮನಕ್ಕಾಗದ ಹೆಣ್ಣು ಇದ್ದರೇನು ಇಲ್ಲದಿದ್ದರೇನು, ಉಣಬಾರದವರಲ್ಲಿ ಊರೂಟವಾದರೇನು (31) ಎನ್ನುವಲ್ಲಿ ಅಸ್ಪೃಶ್ಯರಿಗೆ ಹೊರಗೆ ಅನ್ನವಿಕ್ಕುವುದನ್ನು ಟೀಕಿಸಿದ್ದಾರೆ. ಅಸ್ಪೃಶ್ಯನೆಂದು ದೂರವಿರಿಸಿ ಪಾಯಸದ ಊಟ ಕೊಟ್ಟ ಮಾತ್ರಕ್ಕೆ ಆತ್ಮೀಯತೆಯುಂಟಾಗುವುದೇ? ಇದು ಅವರ ಅನುಭವಜನ್ಯ ಕಟುಕ

## ಲೋಕ ವ್ಯವಹಾರ

ಲೋಕಾನುಭವದ ಪರಿಪಾಕ ಕನಕರ ನುಡಿಯಲ್ಲಿ ಮಿಂಚುತ್ತದೆ. ಮತ್ತೆ ಸನ್ಯಾಸಿಗಳಾಗಿ ಎಲ್ಲವನ್ನು ಬಿಟ್ಟರೂ, ಅವರಿಗೆ ಲೋಕವ್ಯವಹಾರದ ಜ್ಞಾನ ಮೊದಲೇ ಆಗಿದೆ. ಬಡತನದ ಕಷ್ಟವನ್ನು ಕಂಡವರಲ್ಲ ಹೇಳಿ ಪ್ರಯೋಜನವಿಲ್ಲ, 'ಅಡಿಗಡಿಗೆ ಶೋಕದಲಿ ಅಸರಿವರಿಗುಸುರಿದರೆ ಬಡತನ ಬಿಟ್ಟು ಹೋಗುವುದೇನು ಮರುಳೆ?' (112) ಎಂದು ಕೇಳುತ್ತಾರೆ, ತನ್ನ ದಾರಿದ್ರ್ಯ ತಡೆಯದೆ ದೂರಿಕೊಳ್ಳುವವರು ಇತರರ ದೃಷ್ಟಿಯಲ್ಲಿ ಇನ್ನೂ ಕೀಳಾಗುತ್ತಾರೆ, 'ತಾನು ಉಣ್ಣದ ಪರರಿಗಿಕ್ಕದ ಧನವಿದ್ದೇಕೆ?' (124) ಎಂಬಲ್ಲಿ ದಾನ ಅಥವಾ ಭೋಗ ಧನದ ಎಂದು ದಾರಿಗಳು ಎಂದು ಲೋಭಿಗಳಿಗೆ ತಿಳಿಸುತ್ತಾರೆ. ಸ್ವಾರ್ಥಿಗಳು ನ್ಯಾಯಾನ್ಯಾಯಗಳನ್ನೆಂದೂ ಯೋಚಿಸುವದಿಲ್ಲ 'ಸ್ವಾರ್ಥಕ್ಕೆ ನ್ಯಾಯನೆಂದಾದರೂ ಉಂಟೆ? (128) ಕೊಡುವವನೆಯಿಲ್ಲ, ಕೊಟ್ಟು, ಹೇಳುತ್ತಾ ಬರುವವನು ಹೀನದಾತ' [121) ಎಂಬುದು ವಸ್ತು ಸತ್ಯ, ಮನಬಿಚ್ಚಿ ಕೊಟ್ಟವನು ಅದನ್ನು ಹೇಳಲಾರ ಮನಸ್ಸಿಲ್ಲದೇ ಕೊ ಟ್ಟ ವ ನೇ ಅದನ್ನು ಡಂಗುರ ಸಾರುತ್ತಾನೆ. ಇಂಥವರು ಹೆಗ್ಗಳಿಕೆಗಾಗಿ ಹೊರತು ವ್ಯಕ್ತಿಯ ಉಪಕಾರಕ್ಕಾಗಿ ಕೊಡುವುದಿಲ್ಲ–ಎಂಬಲ್ಲಿ ಸೂಕ್ಷ್ಮ ನಿರೀಕ್ಷಣೆ ಇದೆ. "ಕರಣಿಕರುಗಳಿಗಿ ನಂಟು ಕಟ್ಟಿದ ಹಣದ ಗಂಟು" (132) ಎಂಬಲ್ಲಿ ಕರಣಿಕರ [ಲೆಕ್ಕಪತ್ರದವರ) ಲಂಚಕೋರ ಪ್ರವೃತ್ತಿ ಸ್ಪಷ್ಟ, ನೆಲ್ಲು ಕುಟ್ಟುವುದು, ವೇದ ಓದುವುದು, ತನ್ನನ್ನೆ ಸುಡಬಹುದಾದ ಗುಂಡನ್ನೊ ತುಪಾಕಿಯನ್ನೊ ಮಾಡುವುದು, ಭಟರು ಹೋರಾಡುವುದು ಬೆಳೆ ಬೆಳೆಸುವುದು, ಕದ್ದು ಹೊಡೆಸಿಕೊಳ್ಳುವುದು, ಸನ್ಯಾಸಿ ಜಂಗಮ ಜೋಗಿ ವೇಷ ತೊಡುವುದು "ಎಲ್ಲಾ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" (134) ಎಂಬುದು ಕನಕರ ಮಾರ್ಮಿಕ ನುಡಿ. "ಬೆಲೆಬಿದ್ದ

(30ನೇ ಪುಟ ನೋಡಿ)

## ಅನ್ನದಾನ ಯೋಜನೆ ವಿವರಗಳು

"ಶ್ರೀ ವಂಕಟೇಶ್ವರ ನಿತ್ಯ ಅನ್ನದಾನ ಯೋಜನೆ" ಎನ್ನುವ ಹೊಸ ಯೋಜನೆಯಲ್ಲಿ ತಿರುಮಲೆಗೆ ಬರುವ ಯಾತ್ರಿಕರಿಗಾಗಿ ಉಚಿತ ಭೋಜನ ನೀಡುವ ಕಾರ್ಯವನ್ನು ತಿ. ತಿ ದೇ. ಆರಂಭಿಸಿದೆ ಈ ಯೋಜನೆಯ ವಿವರಗಳು ಈ ರೀತಿ ಇವೆ–ಯಾವ ಭಕ್ತರೇ ಆಗಲಿ, ಹತ್ತು ಲಕ್ಷ ರೂ ಗಳನ್ನು ದಾನ ನೀಡಿದಲ್ಲಿ ಅದಕ್ಕೆ ಸಮನಾದ ಅನುದಾನವನ್ನು ತಿ. ತಿ. ದೇ. ಗಳೂ ನೀಡಿ ಒಂದು ದತ್ತಿಯನ್ನು ಸ್ಥಾಪಿಸಿ, ಅದರ ವಾರ್ಷಿಕಬಡ್ಡಿ ಉತ್ಪನ್ನದಿಂದ ದಿನವೂ ಐದುನೂರು ಮಂದಿಗೆ ಉಚಿತ ಭೋಜನ ನೀಡಲಾಗುವುದು. ಈ ದಾನವು ಆದಾಯಕರ ಶಾಸನದ ಯು/ಎಸ್ 80 (ಜಿ) ಕಲಮಿನಂತೆ ಆದಾಯಕರ ವಿಮುಕ್ತವಾಗಿರುವುದು.

ದಾನಿಯ ಹೆಸರನ್ನು ಊಟದ ಕೊಠಡಿಯಲ್ಲಿ ಎದ್ದು ಕಾಣುವಂತೆ ಕಪ್ಪು ಹಲಗೆಯ ಮೇಲೆ ಬರೆಯಲಾಗುವುದು ಹಾಗೂ ಉಚಿತ ಭೋಜನದ ಚೀಟಿಗಳ ಮೇಲೂ ಮುದ್ರಿಸಲಾಗುವುದು. ಜೊತೆಗೆ ವರ್ಷಕ್ಕೊಮ್ಮೆ ಮೂರು ದಿನಗಳ ಕಾಲ ದಾನಿ ಮತ್ತು ಅವರ ಕುಟುಂಬಕ್ಕೆ ತಿರುಮಲೆಯಲ್ಲಿ ಉಚಿತ ವಸತಿ ಹಾಗೂ ಮೂರು ದಿನವೂ ದೇವಾಲಯದಲ್ಲಿ ಆರತಿಯೊಡನೆ ದರ್ಶನಾವಕಾಶವನ್ನು ಏರ್ಪಡಿಸಲಾಗುವುದು.

ದೇಶದೊಳಗಿನ ಹಾಗೂ ವಿದೇಶಗಳ ಎಲ್ಲಾ ಮಾನವಸೇವಾ ಪ್ರೇಮಿ ಭಕ್ತರೂ ತಿ.ತಿ.ದೇ. ಗಳ ಈ ಯೋಜನೆಗೆ ಉದಾರವಾಗಿ ದಾನ ನೀಡುವುದರಿಂದ ಅತಿ ಹೆಚ್ಚು ಮಂದಿ ಯಾತ್ರಿಕರಿಗೆ ಭೋಜನಾವಕಾಶವುಂಟುಮಾಡಿ, ಅವರು ತಿರುಮಲೆಯಲ್ಲಿ ಅಶನ ಚಿಂತಾತುರರಾಗುವುದನ್ನು ತಪ್ಪಿಸಬೇಕೆಂದು ಈ ಮೂಲಕ ಬೇಡಲಾಗಿದೆ.

**ತಿ.ತಿ.ದೇ.**

# ಗೃಹಲಕ್ಷ್ಮಿ

ಸ್ವಾಯಂಭುವ ಮನು ಹಾಗೂ ಶತರೂಪಾದೇವಿಯರುಗಳ ಮೂವರು ಪುತ್ರಿಯರಲ್ಲಿ ಸ್ತ್ರೀತ್ವದ ಹಿರಿಮೆಯನ್ನು ಎತ್ತಿ ಹಿಡಿದವಳೆಂದರೆ ಎರಡನೆಯವಳಾದ ದೇವಹೂತಿ. ಬಾಲ್ಯದಿಂದಲೂ ಇವಳು ಸದ್ಗುಣವತಿಯಾಗಿದ್ದಳು. ರೂಪ, ಲಾವಣ್ಯಗಳಲ್ಲಿ ಇವಳಿಗೆ ಸಮಾನರಾದವರು ಆ ಸಮಯದಲ್ಲಿ ಆಗ ಯಾರೂ ಇರಲಿಲ್ಲ. ಭಾರತವರ್ಷದ ಸಾಮ್ರಾಟನ ಪ್ರೀತಿಯ ಕನ್ಯೆಯಾದರೂ ರಾಜವೈಭವಗಳ ಬಗ್ಗೆ ಇವಳಿಗೆ ಆಸಕ್ತಿಯೇನೂ ಇರಲಿಲ್ಲ. ಇವಳ ಮನಸ್ಸಿನಲ್ಲಿ, ಹೃದಯದಲ್ಲಿ ಧಾರ್ಮಿಕ ವಿಷಯಗಳ ಬಗ್ಗೆ ಸ್ವಾಭಾವಿಕವಾದ ಪ್ರೇಮಾನುರಾಗಗಳು ಇದ್ದವು. ತಪಸ್ಸು ಹಾಗೂ ತ್ಯಾಗಗಳು ಇವಳಿಗೆ ತುಂಬಾ ಪ್ರಿಯವಾಗಿದ್ದವು.

ಇಷ್ಟಪಟ್ಟಿದ್ದೇ ಆಗಿದ್ದರೆ ದೇವ ಗಂಧರ್ವ ಯಕ್ಷ ಕಿನ್ನರ, ಮಾನವ ವರ್ಗಗಳಲ್ಲಿ ಯಾವುದೇ ಐಶ್ವರ್ಯವಂತ ರಾಜಮನೆತನದ ವರನನ್ನು ಇವಳು ವಿವಾಹವಾಗಬಹುದಾಗಿತ್ತು. ಆದರೆ ದೇವಹೂತಿಗೆ ಇಂತಹ ಪ್ರದರ್ಶನ ಥಳುಕಿನ ಜೀವನ ಇಷ್ಟವಿರಲಿಲ್ಲ.

'ಮಾನವ ಜೀವನವಿರುವುದು ಭೋಗ ವಿಲಾಸಗಳಿಗಾಗಿಯಲ್ಲ. ಇವು ಕೊನೆಯಲ್ಲಿ ದುಃಖವನ್ನೇ ನೀಡುತ್ತವೆ. ಜೀವನವನ್ನು ನಾವು ನಡೆಸಬೇಕಾಗಿರುವುದು ಆತ್ಮಕಲ್ಯಾಣಕ್ಕಾಗಿ. ಇದಕ್ಕಾಗಿ ಯಾವ ಮನುಷ್ಯನು ಸಾಧನೆಯನ್ನು ನಡೆಸುವುದಿಲ್ಲವೋ, ಅಂತಹವನು ತನ್ನ ಕೈಯಿಂದಲೇ ತನ್ನನ್ನು ನಾಶಪಡಿಸಿಕೊಳ್ಳುವನು. ಈ ಮೋಕ್ಷ ಸಾಧಕ ಶರೀರವನ್ನು ವಿಷಯ ಭೋಗಗಳಿಗಾಗಿ ಉಪಯೋಗಿಸಿದ್ದೇ ಆದರೆ ಅಂತಹವನು ಅಮೃತವನ್ನು ನೀಡಿ ವಿಷವನ್ನು ಪಡೆದಂತೆಯೇ ಸರಿ..' ಎಂಬ ಭಾವನೆಯನ್ನು ಹೊಂದಿದ್ದವಳು ದೇವಹೂತಿ.

ಇದು ದೇವಹೂತಿಯ ತಂದೆ ತಾಯಿಗಳಿಗೂ ತಿಳಿದ ವಿಷಯವಾಗಿತ್ತು. ತಮ್ಮ ಮಗಳು ಧಾರ್ಮಿಕ ಭಾವನೆಗಳನ್ನು ಹೊಂದಿದ್ದ, ಉತ್ತಮ ಸ್ವರೂಪ ಭಾವನೆಗಳನ್ನು ಹೊಂದಿದ್ದಳೆಂಬುದನ್ನು ಅರಿತವರು, ಅವಳ ಮದುವೆಯ ಬಗ್ಗೆ ಪ್ರಶ್ನಿಸಿದರು. ಆಗ ಅವಳು ಸವಿನಯವಾಗಿ ಹೇಳಿದಳು;

"ತಂದೆಯೇ, ನನಗೆ ಯಾವ ರಾಜ, ಚಕ್ರವರ್ತಿಯ ಕೈಹಿಡಿಯುವ ಆಸೆಯೂ ಇಲ್ಲ. ಓರ್ವ ತಪಸ್ವೀ ಮುನಿಯನ್ನು ಪತಿಯನ್ನಾಗಿ ಸ್ವೀಕರಿಸಲು ನಾನು ಸಿದ್ಧ, ಬೇರೆ ಯಾರೂ ಬೇಡ."

ಇಂತಹ ಧಾರ್ಮಿಕ ಬುದ್ಧಿಯ ತಮ್ಮ ಮಗಳಿಗೆ ಸರಿಯಾದ ವರ ಎಲ್ಲಿರುವನೋ ಎಂದು ಯೋಚಿಸುತ್ತಿರುವಾಗಲೇ ನಾರದ ಮುನಿಗಳ ಪ್ರವೇಶವಾಯಿತು. ಸ್ವಾಯಂಭುವ ಮನುವು ತನ್ನ ಸಮಸ್ಯೆಯನ್ನು ಅವರ ಮುಂದಿಟ್ಟ. ಆಗ ಅವರು ಕರ್ದಮ ಋಷಿಯ ಬಗೆಗೆ ತಿಳಿಸಿದರು.



ಕರ್ದಮನು ಬ್ರಹ್ಮಮಾನಸಪುತ್ರರಾದ ಒಂಬತ್ತು ಮಂದಿ ಬ್ರಹ್ಮರ್ಷಿಗಳಲ್ಲಿ ಒಬ್ಬ. ಈತನು ವಿಷ್ಣುಭಕ್ತಾಗ್ರೇಸರ. ವಿಷ್ಣುವನ್ನು ಮೆಚ್ಚಿಸಲು ಈತನು ಸರಸ್ವತೀ ನದೀತೀರದಲ್ಲಿ ಘೋರವಾದ ತಪಸ್ಸನ್ನು ಮಾಡಿದನು. ಈತನ ತಪಸ್ಸಿಗೆ ಮೆಚ್ಚಿದ ವಿಷ್ಣುವು ಪ್ರತ್ಯಕ್ಷನಾಗಿ 'ವರವನ್ನು ಬೇಡು' ಎಂದು ತಿಳಿಸಿದ. ಆಗ ಕರ್ದಮನು ಸಂತಾನಾರ್ಥವಾಗಿ ಕನ್ಯೆಯನ್ನು ಪ್ರಸಾದಿಸುವಂತೆ ಬೇಡಿದ. ಆಗ ವಿಷ್ಣುವು ಸ್ವಾಯಂಭುವ ಮನುವು ತಾನಾಗಿಯೇ ಇಲ್ಲಿಗೆ ಬಂದು ತನ್ನ ಮಗಳಾದ ದೇವಹೂತಿಯನ್ನು ಆತನಿಗೆ ಕೊಟ್ಟು ಮದುವೆ ಮಾಡುವನು ಎಂದು ತಿಳಿಸಿ, ಕಣ್ಮರೆಯಾದನು.

**'ರಘುಸುತ'**



"ಚಕ್ರವರ್ತಿ! ಆ ಕರ್ದಮನು ಅಂದಿನಿಂದಲೂ, ತಪಸ್ಸನ್ನು ಮಾಡುತ್ತಲೇ ಇದ್ದಾನೆ. ನೀನು ನಿನ್ನ ಪತ್ನಿ ಪುತ್ರಿಯರೊಂದಿಗೆ ಸರಸ್ವತೀನದೀತೀರಕ್ಕೆ ಹೋಗಿ, ಮುನಿಯನ್ನು ಕಂಡು ನಿನ್ನ ಮನದಾಸೆಯನ್ನು ತಿಳಿಸು. ಆತ ಒಪ್ಪುವನು. ಇದರಿಂದ ಲೋಕಕಲ್ಯಾಣವಾಗುವುದು. ಆ ವಿಷ್ಣುವೇ ಮುಂದೆ ಪುತ್ರನಾಗಿ ನಿನ್ನ ಮಗಳಲ್ಲಿ ಜನಿಸುವನು. ಹೀಗೂ ನಿನ್ನ ಸಂತಾನವೂ ಇದರಿಂದ ಧನ್ಯವಾಗುವುದು."

ಎಂದು ಹೇಳಿ ಅಲ್ಲಿಂದ ಹೊರಟು ಹೋದರು.

ಮಹಾರಾಜ ಮನು ಮತ್ತು ಶತರೂಪಾದೇವಿಯರುಗಳು ಮಗಳನ್ನು ಕರೆದುಕೊಂಡು ಮಹರ್ಷಿ ಕರ್ದಮನ ಆಶ್ರಮವನ್ನು ತಲುಪಿದರು. ಅವರೆಲ್ಲರೂ ಮಹರ್ಷಿಗೆ ವಂದಿಸಿದರು. ಆ ಮಹರ್ಷಿಯು ಆಶೀರ್ವಾದ ಮಾಡಿ, ವಿಧಿವತ್ ಸತ್ಕಾರವನ್ನು ನಡೆಸಿದನು. ಮಹಾರಾಜ ವಿನಂತಿಯ ಸ್ವರದಲ್ಲಿ ಬಿನ್ನವಿಸಿಕೊಂಡನು.

"ಮಹರ್ಷಿ ಇವಳು ನನ್ನ ಕನ್ಯೆ, ಉತ್ತಮ ಶೀಲ ಹಾಗೂ ಗುಣಗಳನ್ನು ಹೊಂದಿರುವವಳು. ತಮ್ಮ ಶೀಲ, ರೂಪ ವಿದ್ಯೆ, ಆಯು ಇತ್ಯಾದಿ ಉತ್ತಮಗುಣಗಳ ಬಗ್ಗೆ ಮಹರ್ಷಿ ನಾರದರು ಪ್ರಶಂಸೆಯನ್ನು ಮಾಡಿದ್ದಾರೆ. ಆಗಿನಿಂದಲೂ ನನ್ನ ಪುತ್ರಿಯು ತಮ್ಮನ್ನು ತನ್ನ ಪತಿಯನ್ನಾಗಿ ಪಡೆಯಲು ನಿಶ್ಚಯಿಸಿದ್ದಾಳೆ. ಬಹಳ

ಶ್ರದ್ಧೆಯಿಂದ ನನ್ನ ಈ ಕನ್ಯೆಯನ್ನು ತನ್ನು ಸೇವೆಗಾಗಿ ಅರ್ಪಿಸಲು ಇಷ್ಟಪಡುತ್ತಿದ್ದೇನೆ ದಯವಿಟ್ಟು ಸ್ವೀಕರಿಸಬೇಕು."

ವಿಷ್ಣುವಿನ ಆಜ್ಞೆಯಂತೂ ಮುಂಚೆಯೇ ಸಿಕ್ಕಿತ್ತು. ಆದ್ದರಿಂದ ಈ ಮದುವೆಗೆ ಒಪ್ಪಿಗೆ ನೀಡಿದ.

"ಆದರೆ ನನ್ನದೊಂದು ಷರತ್ತು ."ಎಂದ ಕರ್ದಮ.

"ಏನು ?"

"ನಾನು ಸಂತಾನೋತ್ಪತ್ತಿಗಾಗಿಯೇ ಈ ವಿವಾಹವನ್ನು ಮಾಡಿಕೊಳ್ಳುತ್ತಿದ್ದೇನೆ. ಅದಕ್ಕಾಗಿಯೇ ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸುತ್ತಿದ್ದೇನೆ. ಸಂತಾನೋತ್ಪತ್ತಿ ಯಾದ ಕೂಡಲೆ ನಾನು ಸನ್ಯಾಸಾಶ್ರಮ ವನ್ನು ಸ್ವೀಕರಿಸಿ ಪರಮಾತ್ಮನ ಧ್ಯಾನದಲ್ಲಿ ನನ್ನ ಶೇಷಜೀವನವನ್ನು ಕಳೆಯುತ್ತೇನೆ."

ಇದಕ್ಕೆ ಮನು, ಶತರೂಪಾ ಹಾಗೂ ದೇವಹೂತಿಯರೂ ಒಪ್ಪಿದರು ಅಂತೆಯೇ ಕರ್ದಮ ಹಾಗೂ ದೇವಹೂತಿಯರ ವಿವಾಹವು ನೆರವೇರಿತು. ಮಹಾರಾಣಿ ಶತರೂಪಾಳು ತನ್ನ ಮಗಳು, ಅಳಿಯನಿಗೆ ಬಹು ಮೂಲ್ಯ ವಸ್ತ್ರಗಳು. ಆಭೂಷಣಗಳು ಮತ್ತು ಗೃಹಸ್ಥೋಪಯೋಗಿ ಪಾತ್ರೆಗಳನ್ನು ವರದಕ್ಷಿಣೆಯ ರೂಪದಲ್ಲಿ ನೀಡಿದಳು

ದೇವಹೂತಿಯು ತನು ಮನ ಪ್ರಾಣಗಳಿಂದ ಪ್ರೇಮಪೂರ್ವಕವಾಗಿ ಪತಿಯ ಸೇವೆ ಮಾಡತೊಡಗಿದಳು. ಕಾಮವಾಸನೆ ವಂಚನೆ, ದ್ವೇಷ, ಲೋಭ, ಮದ –ಇತ್ಯಾದಿ ದುರ್ಭಾವನೆಗಳನ್ನು ತನ್ನ ಬಳಿಯಲ್ಲೂ ಆಕೆ ನುಸುಳಗೊಡಲಿಲ್ಲ. ವಿಶ್ವಾಸ. ಪವಿತ್ರತೆ, ಉದಾರತೆ, ಸಂಯಮ, ಶುಶ್ರೂಷೆ, ಪ್ರೇಮ ಮಧುರಭಾಷೆ –ಇತ್ಯಾದಿ ಸದ್ಗುಣಗಳಿಂದಲೂ, ನಿರಂತರವಾಗಿ ಕಠೋರ ವ್ರತದಿಂದಲೂ ಪತಿಯ ಸೇವೆ ಮಾಡಿದುದರಿಂದ ಶರೀರವು ದುರ್ಬಲವಾಯಿತು. ಪತಿಯೇ ಪ್ರತ್ಯಕ್ಷ ದೈವ, ಅವನನ್ನು ಸಂತೋಷಗೊಳಿಸುವುದೇ ಪರಮಧರ್ಮ ಎಂದು ನಂಬಿದಳು.

ಇದನ್ನು ಕಂಡು ಸಂಪ್ರೀತನಾದ ಕರ್ದಮನು "ದೇವೀ, ನಿನ್ನ ಈರೀತಿಯ ಸೇವೆಯಿಂದ ಸಂತುಷ್ಟನಾಗಿದ್ದೇನೆ. ಭಗವಂತನ ಕೃಪೆಯಿಂದ ತಪಸ್ಸಮಾಧಿ, ಉಪಾಸನೆ ಹಾಗೂ ಯೋಗಗಳ ಮುಖಾಂತರ ಪಡೆದ ಭಯಶೋಕರಹಿತ ವಿಭೂತಿತ್ವವನ್ನು ಮೇಲೆ ನಿನಗೂ ಹೇಳಿದೆ. ನಿನಗೆ ದಿವ್ಯದೃಷ್ಟಿಯನ್ನು ನೀಡುತ್ತಿದ್ದೇನೆ. ಪಾತಿವ್ರತ್ಯ ಧರ್ಮವನ್ನು ನೀನು ಪರಿಪಾಲಿಸಿದ್ದರಿಂದ ನಿನಗೆ ದಿವ್ಯದೃಷ್ಟಿಯನ್ನು ದಯಪಾಲಿಸುತ್ತಿದ್ದೇನೆ".

(19 ನೇ ಪುಟ ನೋಡಿ)



ಓಂ ಶ್ರೀ ಮಾತ್ರೇ ನಮಃ ದೂರವಾಣಿ 472013

## ನವಶಕ್ತಿ ನಿಲಯದವರಿಂದ ಭಕ್ತರಿಗೆ ವಿಶಿಷ್ಟವಾದ ಕೊಡುಗೆ

ಶ್ರೀ ಕಂಚಿ ಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿಸ್ವಾಮಿಗಳು. ಶ್ರೀ ತಿರುಮುರುಗ ಕೃಪಾನಂದ ವಾರಿಯಾರ್ ಮೊದಲಾದ ಜಗದ್ಗುರು ಹಾಗೂ ಸಂತರಿಂದ ಆಶೀರ್ವದಿಸಲ್ಪಟ್ಟ ದೈವಿಕ ವಸ್ತುಗಳ ತಯಾರಕರು

ಬೆಲೆ ರೂಗಳಲ್ಲಿ

1. ಶ್ರೀ ಮಹಾಮೇರು ಪಂಚಲೋಹ (10×10c.m ನಿಂದ 16×16 c m.) ಅಭ್ಯರ್ಥನೆಯ ಮೇರೆಗೆ.
2. ಶ್ರೀ ಮಹಾಮೇರು ಪಂಚಲೋಹ (6×6 c m) 500–00
3. ಶ್ರೀ ಮಹಾಮೇರು ಪಂಚ ಲೋಹ (4½×4½ c m.) 300–00
4. ಮಹಾಲಕ್ಷ್ಮಿ ಮಹಾಯಂತ್ರ (24×24 c.m) 1000–00
5 ಮಹಾಸುದರ್ಶನ (16×16c m.) 500–00
6 ಸ್ವಯಂವರ " 125–00
7 ಸ್ವಯಂವರ (8×8 c.m.) 150–00
8 ಇಂದ್ರಾಕ್ಷಿ (16×16 c.m) 500–00
9. ಕಾರ್ತವೀರ್ಯಾರ್ಜುನ 500–00
10 ಮತ್ಸ್ಯ ಯಂತ್ರ (8×8C M.) 120–00
11. ದೇವಾಲಯಗಳ ಯಂತ್ರಗಳು ಒಂದಕ್ಕೆ 101–00
12. ವಿದ್ಯುದೀಕೃತ ತಾಮ್ರದ ಬಳೆ " 20–00
13 ಶ್ರೀಚಕ್ರ (8×8 c.m.) 125–00
14. ಇತರ ಯಂತ್ರಗಳು 120–00
15 ಶ್ರೀ ದೃಷ್ಟಿ ನಿವಾರಕ ಒಂದು ಬದಿಗೆ ಹಾಗೂ ಇನ್ನೊಂದು ಕಡೆ ಸುದರ್ಶನವಿರುವ ಪದಕ 60–00
16. ಶ್ರೀ ದೃಷ್ಟಿನಿವಾರಕ ಯಂತ್ರ (ಫ್ರೇಮ್) 55–00
17 ಇತರ ಪದಕಗಳು 55–00
18 ಶ್ರೀ ಮುರುಗ ಅಕ್ಷರಾಸನ ಪದಕ 40–00
19. ಶ್ರೀ ಮುರುಗ ವಶ್ಯ ಪದಕ 30–00
20. ಅಪ್ಪಟ ಸ್ಫಟಿಕ ಮಾಲೆ (54 ಮಣಿಗಳು) 275–00
21 ರುದ್ರಾಕ್ಷಮಾಲೆ (ಬೆಳ್ಳಿದಾರ ಪ್ರತಿಯೊಂದಕ್ಕೆ) 275–00
22. ತುಳಸಿ ಮಾಲೆ (ಬೆಳ್ಳಿದಾರ 54 ಮಣಿಗಳು) 90–00
23 ಅಪ್ಪಟ ಕಮಲಮಣಿ (ಬೆಳ್ಳಿದಾರ 54 ಮಣಿಗಳದ್ದು) 125–00

ದೇವಾಲಯಗಳಿಗೆ ಹಾಗೂ ಮನೆಗಳಿಗೆ ಬೇಕಾದ ಎಲ್ಲ ಯಂತ್ರಗಳೂ ದೊರೆಯುತ್ತವೆ. ಬೇಡಿಕೆಗೆ ತಕ್ಕಂತೆ ಕರಿಕಲ್ಲಿನ ವಿಗ್ರಹಗಳು ದೊರೆಯುತ್ತವೆ. ಉಚಿತ ಕ್ಯಾಟಲಾಗಿಗಾಗಿ ಕೆಳಗಣ ವಿಳಾಸಕ್ಕೆ 50 ಪೈಸೆ ಅಂಚೆ ಚೀಟಿಯನ್ನು ಇಟ್ಟು ಬರೆಯಿರಿ. ವಿದೇಶೀ ಆರ್ಡರುಗಳಿಗೆ 25% ಅಧಿಕ.
ದಯವಿಟ್ಟು ಬರೆಯಿರಿ (ಇಂಗ್ಲೀಷಿನಲ್ಲಿ ಮಾತ್ರ) :

ವಿಶ್ವಕರ್ಮಜ್ಞ ಶ್ರೀ ವಿದ್ಯಾ ಉಪಾಸಕ
**ಸ್ವಾಮಿಜೀ ಶ್ರೀ ಎಸ್. ಟಿ. ಮುರುಗಭೂಷಣಂ**
ಅಧ್ಯಕ್ಷರು ನವಶಕ್ತಿ ನಿಲಯ
153, ಲಾಯ್ಡ್ಸ್ ರೋಡ್, ಗೋಪಾಲಪುರಂ,
ಮದರಾಸು – 600086.

# ಭರತನ ಭ್ರಾತೃ ವಾತ್ಸಲ್ಯ

ಶ್ರೀಮದ್ರಾಮಾಯಣದಲ್ಲಿ ಐನೂರಕ್ಕೂ ಹೆಚ್ಚು ಸರ್ಗಗಳಿವೆ. ಇಷ್ಟು ವಿಸ್ತಾರವಾದ ಗ್ರಂಥದಲ್ಲಿ 'ಭರತನಿಗೆ ಸಂಬಂಧಪಟ್ಟವು ಅಯೋಧ್ಯಾ ಕಾಂಡದ ಉತ್ತರಭಾಗದಲ್ಲಿ ಬರುವ ಕೇವಲ ಸುಮಾರು ಐವತ್ತು ಸರ್ಗಗಳು ಮತ್ತು ಯುದ್ಧ ಕಾಂಡದ ಕೊನೆಯಲ್ಲಿ ಬರುವ ಎರಡು ಮೂರು ಸರ್ಗಗಳು ಮಾತ್ರ. ಇಷ್ಟು ಪರಿಮಿತವಾದ ಭಾಗದಲ್ಲಿ ವಾಲ್ಮೀಕಿಋಷಿಗಳು ಭರತನ ಅಸಾದೃಶವಾದ ಭ್ರಾತೃವಾತ್ಸಲ್ಯವನ್ನು ಬಹು ಖಚಿತವಾಗಿ ಚಿತ್ರಿಸಿದ್ದಾರೆ

ಭರತನು ದಶರಥನ ಮೋಹದ ಮಡದಿಯಾದ ಕೈಕೇಯಿಯ ಅಭಿಮಾನ ಪುತ್ರ. ವಿಷ್ಣುವಿನ ಎಂಟನೆಯ ಒಂದು ಅಂಶದಿಂದ ಜನಿಸಿದವನು. ಪುನರ್ವಸು ನಕ್ಷತ್ರದಲ್ಲಿ ಅವನು ಜನಿಸಿದನು. ರಾಮನಿಗಿಂತ ಒಂದು ದಿನ ಮಾತ್ರ ಚಿಕ್ಕವನು. ಬಾಲ್ಯದಲ್ಲಿ ದಶರಥನ ನಾಲ್ಕು ಮಕ್ಕಳು ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಯಾಗಿ ದಶರಥನ ಶರೀರದಿಂದಲೇ ಉದ್ಭವಿಸಿದ ಚತುರ್ಭುಜಗಳೋ ಎಂಬಂತೆ ಕಂಗೊಳಿಸುತ್ತಿದ್ದರು. ಈ ಕಾಲದಲ್ಲಿ ಲಕ್ಷ್ಮಣನಿಗೆ ರಾಮನಲ್ಲಿಯೂ, ಶತ್ರುಘ್ನನಿಗೆ ಭರತನಲ್ಲಿಯೂ ಹೆಚ್ಚು ಅಭಿಮಾನವು ಬೆಳೆಯುತ್ತಾ ಬಂದಿತು. ಜೊತೆ ಜೊತೆಯಲ್ಲಿಯೇ ವಿಹರಿಸುತ್ತಿದ್ದರಿಂದ ರಾಮನಲ್ಲಿ ಭರತನಿಗೆ ಲಕ್ಷ್ಮಣನಷ್ಟು ನಿಕಟ ಸಂಬಂಧವು ಬೆಳೆದಂತೆ ಕಾಣಲಿಲ್ಲ.

ಮುಂದೆ ಇವರೆಲ್ಲರು ಸಕಲವಿದ್ಯಾ ಕುಶಲರಾಗಿ ಸುಮಾರು 16 ವರ್ಷದವರೆಗೆ ದಶರಥನ ಅರಮನೆಯಲ್ಲಿಯೇ ಬೆಳೆದರು ಹೀಗಿರುವಲ್ಲಿ ವಿಶ್ವಾಮಿತ್ರರು ತಮ್ಮ ಯಜ್ಞರಕ್ಷಣೆಗಾಗಿ ದಶರಥನ ಆಸ್ಥಾನಕ್ಕೆ ಬಂದು ರಾಮಲಕ್ಷ್ಮಣರನ್ನು ತಮ್ಮೊಡನೆ ಕರೆದುಕೊಂಡು ಹೋದರು. ವಿಶ್ವಾಮಿತ್ರರು ರಾಮಲಕ್ಷ್ಮಣರಿಗೆ ಮಂತ್ರಾಸ್ತ್ರಗಳನ್ನು ಉಪದೇಶಮಾಡಿ ತಾಟಕಾ ಸುಬಾಹುಗಳನ್ನು ಸಂಹರಿಸಿ ಯಜ್ಞವು ಪೂರ್ಣವಾದ ಮೇಲೆ ಜನಕಮಹಾರಾಜನ ಯಜ್ಞ ಸಂದರ್ಶನಕ್ಕಾಗಿ ಮಿಥಿಲಾಪುರಕ್ಕೆ ಹೋಗುವರು ಅಲ್ಲಿ ಶಿವಧನಸ್ಸನ್ನು ಭಂಗಮಾಡಿದುದಕ್ಕಾಗಿ ಸೀತಾದೇವಿಯು ಶುಲ್ಕವಾಗಿ ರಾಮನಿಗೆ ದೊರೆಯುವಳು. ಇವರ ವಿವಾಹಕ್ಕಾಗಿ ಬಂದ ದಶರಥನೊಡನೆ ಬಂದ ಭರತ ಶತ್ರುಘ್ನರು ಮಾಂಡವೀ ಶ್ರುತಿಕೀರ್ತಿಯರನ್ನು ಮದುವೆಯಾಗಿ ಅಯೋಧ್ಯೆಗೆ ಹಿಂದಿರುಗುವರು. ಇದಾದ ತಕ್ಷಣವೇ ಭರತನು ತನ್ನ ಮಾತಾಮಹನಾದ ಅಶ್ವಪತಿಯಲ್ಲಿಗೆ ಹೊರಟು ಹೋಗುವನು, ಅಲ್ಲಿಂದ ಸುಮಾರು 12 ವರ್ಷ ಭರತನು ಅಲ್ಲಿಯೇ ಇದ್ದಂತೆ ಊಹಿಸಲಾಗುತ್ತದೆ. ಈ ಕಾಲದಲ್ಲೆಲ್ಲಾ ರಾಮ ಮತ್ತು ಭರತರ ಸಹಜೀವನ ಹೆಚ್ಚಾಗಿಲ್ಲದಂತೆ ಕಾಣುತ್ತದೆ.

ಮುಂದೆ ದಶರಥನು ರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡಬೇಕೆಂದು ನಿಶ್ಚಯಿಸಿದ ಕಾಲದಲ್ಲಿಯೂ ಭರತನು ಅಯೋಧ್ಯೆಯಲ್ಲಿ ಇರಲಿಲ್ಲ. ದಶರಥನು ರಾಮನ ಪಟ್ಟಾಭಿಷೇಕವನ್ನು ಭರತನಿಲ್ಲದೇ ಇರುವಾಗ ಮಾಡುವುದು ಯುಕ್ತವೆಂದು ಯೋಚಿಸಿದಂತೆ ಕಾವ್ಯದಲ್ಲಿ ಸೂಚಿತವಾಗಿದೆ. ಭರತನು ಹೊರದೇಶದಲ್ಲಿದ್ದರೂ ತಂದೆ ಮತ್ತು ಅಣ್ಣಂದಿರ ವಿಷಯದಲ್ಲಿ ವಿಶೇಷ ಭಕ್ತಿಯಿಂದ ನಡೆದುಕೊಂಡನೆಂದು ಉಕ್ತವಾಗಿದೆ

ಮಕ್ಕಳು ಹನ್ನೆರಡು ವರ್ಷಗಳ ಕಾಲ ಸುಖಸಂಸಾರ ನಡೆಸಿಕೊಂಡು ಬಂದ ಮೇಲೆ ದಶರಥನು ತನ್ನ ಹಿರಿಯ ಮಗನಾದ ರಾಮನಿಗೆ ಪಟ್ಟಾಭಿಷೇಕಮಾಡಲು ಉದ್ಯುಕ್ತನಾಗುವ. ಈ 12 ವರ್ಷಗಳ ಕಾಲದಲ್ಲಿಯೂ ಭರತ ಶತ್ರುಘ್ನರು ಮಾತಾಮಹನ ಮನೆಯಲ್ಲಿಯೇ ಇದ್ದರೆಂಬ ವಿಷಯ ಖಚಿತವಾಗಿಲ್ಲ ಅಲ್ಲಿಯೇ ಇದ್ದರೆಂದು ಊಹಿಸಿಕೊಳ್ಳಬೇಕು ಆದುದರಿಂದ ಆ ಕಾಲದಲ್ಲಿಯೂ ರಾಮ ಮತ್ತು ಭರತರ ನಿಕಟ ಸಾಮೀಪ್ಯ ಇರಲಿಲ್ಲವೆಂದು ತಿಳಿಯಬೇಕಾಗುತ್ತದೆ. ಇಷ್ಟಾದರೂ ಭರತನು ನಿರ್ವ್ಯಾಜವಾಗಿ ರಾಮನಲ್ಲಿ ಭ್ರಾತೃಭಕ್ತಿಯನ್ನು ಪ್ರದರ್ಶಿಸುತ್ತಿದ್ದನೆಂದು ಸ್ಫುಟಗೊಳಿಸುವುದು ಕವಿಯ ಆಶಯವಾಗಿರಬಹುದು.

ಭರತನು ಅಯೋಧ್ಯದಲ್ಲಿ ಇರದ ಕಾಲದಲ್ಲಿ ರಾಮನ ಯುವರಾಜ ಪಟ್ಟಾಭಿಷೇಕ ಪ್ರಯತ್ನವು ನಡೆಯಿತು. ಮಂಥರೆಯ ದುರ್ಬೋಧನೆಯಿಂದ ಕೈಕೇಯಿಯೂ ಹಿಂದೆ ದಶರಥನು ತನಗೆ ಕೊಟ್ಟಿದ್ದ ಎರಡು ವರಗಳ ಪ್ರಕಾರ ಭರತನಿಗೆ ಯುವರಾಜ ಪಟ್ಟಾಭಿಷೇಕವನ್ನೂ ರಾಮನಿಗೆ ಹದಿನಾಲ್ಕು ವರ್ಷಗಳ ವನವಾಸವನ್ನೂ ಯಾಚಿಸಿದ್ದಳು. ವೃದ್ಧನ ಅನುನಯವಾದ ಮಾತುಗಳಾವುವೂ ಪ್ರಯೋಜನವಾಗಲಿಲ್ಲ ರಾಮನು ಪಿತೃವಾಕ್ಯ ಪರಿಪಾಲನೆಗಾಗಿ ಸೀತಾ, ಲಕ್ಷ್ಮಣರೊಡನೆ ದಂಡಕಾರಣ್ಯಕ್ಕೆ ತೆರಳಿದನು. ರಾಮನ ವಿರಹದಿಂದ ದಶರಥನು ಮರಣಹೊಂದಿದನು ರಾಜ್ಯವು ಅರಾಜಕವಾಯಿತು. ಅಮಾತ್ಯರು ಸಭೆ ಸೇರಿ ಭರತನನ್ನು ಕರೆಸಿ ಅವನಿಗೆ ಪಟ್ಟಾಭಿಷೇಕಮಾಡಿಸಬೇಕೆಂದು ನಿಷ್ಕರ್ಷಿಸಿ ಅಶ್ವಪತಿಯ ರಾಜಧಾನಿಯಾದ ರಾಜಗೃಹಕ್ಕೆ ದೂತರನ್ನು ಕಳಿಸಿದರು. ಪಾಪ, ಭರತನಿಗೆ ಇದಾವುದು ತಿಳಿದಿರಲಿಲ್ಲ

ಡಾ॥ ಎನ್. ಅನಂತರಂಗಾಚಾರ್

ದೂತರು ರಾಜಗೃಹವನ್ನು ಸೇರಿದ ದಿನದ ಪೂರ್ವರಾತ್ರಿ ಭರತನಿಗೆ ಒಂದು ಕೆಟ್ಟ ಕನಸು ಬಿತ್ತು. ಆ ದುಃಸ್ವಪ್ನದ ಫಲವಾಗಿ ದಶರಥನಿಗೋ ರಾಮನಿಗೋ ವಿಪತ್ತು ಸಂಭವಿಸಬಹುದೆಂದು ಭರತನು ಚಿಂತಿಸುತ್ತಿರುವಾಗ ಅಯೋಧ್ಯೆಯ ದೂತರು ಕಾಣಿಸಿಕೊಂಡು ಪುರೋಹಿತರು ಮಂತ್ರಿಗಳು ಅವನನ್ನು ತಕ್ಷಣ ಅಯೋಧ್ಯೆಗೆ ಬರಬೇಕೆಂದು ತಿಳಿಸಿದ್ದಾರೆ ಎಂದರು. ಭರತನ ಸೌಜನ್ಯ ಇಲ್ಲಿಂದ ಪ್ರಕಟವಾಗಲು ಪ್ರಾರಂಭವಾಗುತ್ತದೆ ಅವನು ಅಯೋಧ್ಯದಲ್ಲಿರುವ ರಾಮ ದಶರಥ, ಲಕ್ಷ್ಮಣ, ಕೌಸಲ್ಯೆ, ಸುಮಿತ್ರೆ ಕೈಕೇಯಿ ಮೊದಲಾದ ಎಲ್ಲರ ಯೋಗಕ್ಷೇಮವನ್ನು ವಿಚಾರಿಸುತ್ತಾನೆ. ದೂತರು ಯಾವುದನ್ನು ಸ್ಪಷ್ಟವಾಗಿ ತಿಳಿಸುವುದಿಲ್ಲ. ಭರತನಿಗೆ ಒಂದು ವಿಧವಾದ ಮೂಕವ್ಯಥೆಯುಂಟಾಗುತ್ತದೆ ಹೆಚ್ಚು ಪ್ರಶ್ನೆ ಮಾಡದೆ ಅಯೊಧ್ಯೆಗೆ ಜೊತೆಯಲ್ಲಿ ಇದ್ದವರನ್ನೆಲ್ಲ ಹಿಂದೆ ಬಿಟ್ಟು ತಾನು ಮುಂದ ಬರುತ್ತಾನೆ ಅಯೋಧ್ಯಾ ನಗರವನ್ನು ಸೇರಿದಾಗ ಅದು ಬಹು ಶೂನ್ಯವಾಗಿ ಕಾಣುತ್ತದೆ ತನ್ನವರ ಚಿಂತೆ ಹೆಚ್ಚುತ್ತದೆ ಏನೋ ಅಘಾತವಾಗಿರಬೇಕೆಂಬ ಶಂಕೆ ಹೃದಯವನ್ನು ಅಘಾತಿಸು ಈ ಸನ್ನಿವೇಶದಲ್ಲಿ ವೈಜಯಂತಿಯ ತೀರದಿಂದ ಪ್ರವೇಶಮಾಡುತ್ತಾನೆ ದುಃಶಕುನಗಳು ಕಾಣಿಸುತ್ತವೆ ಕಾರಣವೇ ತಿಳಿಯದೆ ಹೃದಯವು ಯಾವುದೋ ಭಯದಿಂದ ತಳಮಳಿಸುತ್ತದೆ. ಸಾರಥಿಯನ್ನು ಕುರಿತು ಕಾರಣವನ್ನು ಕೇಳುವನು ಮನಸ್ಸಿನ ತಳಮಳದಿಂದ ನೇರ ತಂದೆಯ ಅರಮನೆಗೆ ಪ್ರವೇಶಿಸುತ್ತಾನೆ ಅಲ್ಲಿ ತಂದೆಯನ್ನು ಕಾಣುವುದಿಲ್ಲ. ತಾಯಿಯಾದ ಕೈಕೇಯಿಯ ಅರಮನೆಗೆ ಹೋಗುತ್ತಾನೆ ಬಹು ಹರುಷದಿಂದ ಭರತನನ್ನು ಸ್ವಾಗತಿಸಿ ತನ್ನ ತಂದೆ ಮನೆಯ ಯೋಗಕ್ಷೇಮವನ್ನು ಪ್ರಶ್ನೆಮಾಡುತ್ತಾಳೆ ಭರತನಾದರೂ ತಂದೆಯ ವಿಷಯ ಕೇಳಬೇಕೆಂಬ ಕುತೂಹಲದಿಂದ ಅವಳ ಪ್ರಶ್ನೆಗಳಿಗೆಲ್ಲ ಬಹಳ ವೇಗವಾಗಿ ಉತ್ತರವಿತ್ತು, ತಂದೆಯೆಲ್ಲೆಂದು ಪ್ರಶ್ನೆ ಮಾಡುವನು. ಆ ವಿಷಯ ಭರತನಿಗೆ ಬಹು ಪ್ರಿಯವೆಂದು ಭಾವಿಸಿ ಕೈಕೆಯು 'ನಿಮ್ಮ ತಂದೆ ಸಮಸ್ತ ಪ್ರಾಣಿಗಳಲ್ಲಿ ಅನಿವಾರ್ಯವಾದ ಗತಿ ಯಾವುದುಂಟೋ ಅದನ್ನೆ ಆತನು ಹೊಂದಿದನು.' ಎಂದು ತಿಳಿಸುವಳು. ಆ ಮಾತನ್ನು ಕೇಳಿದೊಡನೆ ಧರ್ಮಿಷ್ಠನೂ, ನಿಶ್ಚಲಚಿತ್ತನೂ ಶುದ್ಧ ಚಾರಿತ್ರನೂ ಆದ ಭರತನು ಕಂಡಗೆಟ್ಟು ನೆಲದ ಮೇಲೆ ದೊಪ್ಪೆಂದು ಬೀಳುವನು ಗೊಳಾತೊಡಗಿದನು. ತಾಯಿಯು

ಸಮಾಧಾನದಿಂದ ಸಂತೈಸಿಕೊಂಡು ಭರತನು 'ಅಮ್ಮಾ ಮಹಾರಾಜರು ರಾಮನಿಗೆ ಪಟ್ಟಾಭಿಷೇಕಮಾಡಬಹುದು ಇಲ್ಲದಿದ್ದರೆ ದೊಡ್ಡ ಯಾಗವನ್ನು ಮಾಡಬಹುದು ಎಂದು ಬಂದೆ, ಎಲ್ಲವೂ ಅಸ್ತವ್ಯಸ್ತವಾಯಿತು.' ಎಂದು ಗೋಳಾಡುವನು ಮುಂದೆ ಕೈಕೇಯಿ ಕ್ರಮಕ್ರಮವಾಗಿ ರಾಮನ ವನವಾಸದ ವಿಷಯವನ್ನು ಭರತನು ಯುವರಾಜನಾಗಿ ಪಟ್ಟಾಭಿಷೇಕವಾಗಬೇಕಾದುದನ್ನು ತಿಳಿಯಪಡಿಸುವಳು. (ಇಲ್ಲಿ ಕವಿಯು ವಿಷಯವನ್ನು ಪರಿಚಯ ಮಾಡುವಾಗ ನುರಿತ ಮನಶ್ಶಾಸ್ತ್ರಜ್ಞನಹಾಗೆ ಸೂಕ್ತ ಪ್ರಶ್ನೋತ್ತರಗಳಿಂದ ವಿಷಯವನ್ನು ವಿಶದಪಡಸಿದ್ದಾನೆ ) ಅವನಿಗೆ ಅದರಿಂದ ತಡೆಯಲಾಗದ ದುಃಖ ಉಂಟಾಗುವುದು ಅವಳಿಂದಾದ ಅನರ್ಥವನ್ನು ಹೀಗೆ ತೋಡಿಕೊಳ್ಳುವನು 'ಮೊದಲು ತಂದೆಯ ಅಕಾಲ ಮರಣ, ಎರಡನೆಯದು ರಾಮನ ವನ ಪ್ರಯಾಣ,ಸೀತಾ ಲಕ್ಷ್ಮಣರ ಅಗಲಿಕೆ ತನಗೆ ಶಾಶ್ವತವಾದ ಅಪಕೀರ್ತಿ–ಇವೆಲ್ಲವನ್ನು ಏಕಕಾಲದಲ್ಲಿ ಉಂಟುಮಾಡಿದಾಳೆಂದು ಅವಹೇಳನಮಾಡಿ ರಾಮನ ಗುಣಗಳನ್ನು ಕೊಂಡಾಡುವನು ಹಾಗೆಯೇ ತನ್ನ ಅಸಾಮರ್ಥ್ಯವನ್ನು ತನ್ನಲ್ಲಿ ವಿಶೇಷವಾದ ಪ್ರೀತಿಯಿಂದ ಕೂಡಿದ್ದ ರಾಮನನ್ನು ಹೊರಗಟ್ಟಿದ ಪಾಪಿಯೆಂದು ಅವಳನ್ನು ನಿಗ್ರಹಿಸುವನು ಕುಲಧರ್ಮವು ನಾಶವಾಯಿತೆಂದು ಮರಗುವನು ಕೌಸಲ್ಯಾದೇವಿಗೆ ಉಂಟಾದ ಪುತ್ರಶೋಕಕ್ಕಾಗಿ ಆಕ್ರಂದಿಸುವನು. ಅಣ್ಣನಿಗೆ ಹೇಗಾದರೂ ಸಮಾಧಾನಮಾಡಿ ಅವನ ರಾಜ್ಯವನ್ನು ಅವನಿಗೇ ಒಪ್ಪಿಸುತ್ತೇನೆಂದು, ನಿಷ್ಕರ್ಷಿಸುವನು ಅವನಿಗೆ ಬದಲಾಗಿ ಶತ್ರುಘ್ನ ಸಹಿತ ತಾನು ವನವಾಸಕ್ಕೆ ತೆರಳುವುದಾಗಿ ನಿಷ್ಕರ್ಷೆ ಮಾಡುವನು ಈ ಮಧ್ಯೆ ಕೌಸಲ್ಯ ಮತ್ತು ಸುಮಿತ್ರೆಯರ ದರ್ಶನವಾಗುವುದು ಅವರ ಕ್ಷಮಾಪಣೆಯನ್ನು ಕೇಳಿಕೊಂಡು, ಈ ಕಾರ್ಯದಲ್ಲಿ ತನ್ನ ಅಪರಾಧ ಏನೂ ಇಲ್ಲವೆಂದು ಅದಕ್ಕೆ ತಾನು ಭಾಗಿಯಾಗಿದ್ದರೆ ತಾನು ಎಲ್ಲಾ ವಿಧವಾದ ಪಾತಕಗಳಿಗೂ ಭಾಗಿಯಾಗಬಹುದೆಂದೂ ರಾಮನನ್ನು ಹಿಂದಕ್ಕೆ ಕರೆತರುವುದು ಖಂಡಿತವೆಂದು ಅವರಿಗೆ ಆಶ್ವಾಸನವನ್ನು ನೀಡುವನು.

ಮುಂದೆ ವಶಿಷ್ಠರ ಆಜ್ಞೆಯಂತೆ ತಂದೆಯಾದ ದಶರಥನಿಗೆ ಔರ್ಧ್ವದೈಹಿಕ ವಿಧಿಗಳು ಶಾಸ್ತ್ರೀಯವಾಗಿ ನಡೆಯುವವು ಆಗ ಭರತನು ರಾಮನನ್ನು ಹಿಂದಕ್ಕೆ ಕರೆತರಲು ಯೋಚಿಸುತ್ತಿರುವಾಗಲೇ ಈ ಎಲ್ಲಾ ಅನರ್ಥಕ್ಕೂ ಕಾರಣವಾದ ಮಂಥರೆ ಕಣ್ಣಿಗೆ ಬೀಳುವಳು. ಅವಳನ್ನು ನೋಡಿ ಶತ್ರುಘ್ನ ಅವಳನ್ನು ಕೊಂದು ಹಾಕುವನೆಂದು ಆರ್ಭಟಿಸಿದಾಗ ಆ ಸ್ತ್ರೀ ವಧೆಯಿಂದ ರಾಮನಿಗೆ ಕೋಪ ಬರಬಹುದೆಂದು ಚಿಂತಿಸಿ ಶತ್ರುಘ್ನನನ್ನು ತಡೆಯುವನು

ಹದಿನಾಲ್ಕನೆಯ ದಿನ ಪ್ರಾತಃಕಾಲ ಸಭೆಯವರೆಲ್ಲಾ ಸೇರಿ ಭರತನು ಯುವರಾಜನಾಗಬೇಕೆಂದು ಪ್ರಾರ್ಥಿಸುವರು ಭರತನು ಅವರ ಮಾತು ಅಯುಕ್ತವೆಂದೂ ತಾನೇ ಕಾಡಿಗೆ ಹೋಗಿ ರಾಮನನ್ನು ಕರದುಕೊಂಡು ಬಂದು ಅವನಿಗೆ ಅಭಿಷೇಕ ಮಾಡುವನೆಂದು ಆ ಕಾರ್ಯಕ್ಕೆ ಸೂಕ್ತ ಪ್ರಯತ್ನವಾಗಬೇಕೆಂದು ತಿಳಿಸುವನು. ಅದರಂತೆ ಸಮಸ್ತ ಸಿದ್ಧತೆಗಳು ಏರ್ಪಾಡಾಗುವವು. ಭರತನ ಜೋತೆಯಲ್ಲಿ ಪೂರ್ಣನಗರವೇ ಪ್ರಯಾಣಮಾಡುವದು.

ದಾರಿಯಲ್ಲಿ ಗುಹನನ್ನು ಸಂದರ್ಶಿಸಿ ಅವನಿಂದ ರಾಮಲಕ್ಷ್ಮಣರ ವಿಚಾರವನ್ನು ತಿಳಿದುಕೊಂಡು ಅವರು ತನಗಾಗಿ ತನ್ನ ದನಿಯಿಂದ ಪಟ್ಟ ಶ್ರಮಕ್ಕಾಗಿ ಮರುಗಿ, ಗಂಗಾನದಿಯನ್ನು ದಾಟಿ ಭರದ್ವಾಜ ಆಶ್ರಮಕ್ಕೆ ಸೇರಿ ತಾನು ತಮ್ಮ ಅಣ್ಣನನ್ನು ಹಿಂದಕ್ಕೆ ಕರೆತರಲು ಹೋಗುತ್ತಿರುವುವೆಂದು ಹೇಳಿದುದರಿಂದ ತೃಪ್ತರಾದ ಭಾರದ್ವಾಜರ ಆತಿಥ್ಯವನ್ನು ಸ್ವೀಕರಿಸಿ, ಅವರ ಸೂಚನೆಪ್ರಕಾರ ಸೀತಾರಾಮಲಕ್ಷ್ಮಣರು ವಾಸವಾಗಿದ್ದ ಚಿತ್ರಕೂಟಕ್ಕೆ ಪ್ರಯಾಣ ಮಾಡುವನು.

ಚಿತ್ರಕೂಟದ ಸಮೀಪಕ್ಕೆ ಬಂದಾಗ ಭರತನ ಬೃಹತ್ ಸೈನ್ಯವನ್ನು ನೋಡಿ ಲಕ್ಷ್ಮಣನು ಕೋಪಗೊಂಡು, ಭರತನು ತಮ್ಮನ್ನು ವಧಿಸುವುದಕ್ಕಾಗಿ ಬಂದಿರಬಹುದೆಂದು ಊಹಿಸಿ ಅವನನ್ನು ಸಂಹಾರಮಾಡಲು ಸೂಕ್ತ ಎಚ್ಚರಿಕೆಯನ್ನು ತೆಗೆದುಕೊಳ್ಳಬೇಕೆಂದು ರಾಮನಿಗೆ ಸೂಚಿಸುವನು ಆಗ ರಾಮನು ಭರತನ ವಿಷಯವಾಗಿ ಹೀಗೆ ಹೇಳುವನು

"ಭರತನು ತನ್ನನ್ನು ಪ್ರೀತಿಯಿಂದ ನೋಡಲು ಬಂದಿದ್ದಾನೆ. ಅವನು ಯಾವ ದುರ್ಭಾವನೆಯಿಂದಲೂ ಬಂದಿಲ್ಲ ತಾಯಿಯಾದ ಕೈಕೆಯಿಯ ಮೇಲೆ ಕೋಪಿಸಿಕೊಂಡು ತಂದೆಯನ್ನು ಒಪ್ಪಿಸಿ ತನಗೆ ರಾಜ್ಯವನು ಒಪ್ಪಿಸಲು ಬಂದಿದ್ದಾನೆ ಭರತನು ಇದುವರೆಗ್ನೆ ಯಾವ ಕೇಡನ್ನೂ ಮಾಡಿಲ್ಲ, ಲಕ್ಷ್ಮಣ ನಿನಗೆ ರಾಜ್ಯಾಭಿಲಾಷೆ ಇದ್ದರೆ ಈಗಲೇ ಅದನ್ನು ನಿನಗೆ ಕೊಡಿಸುತ್ತೇನೆ". ಎಂದು ರಾಮನು ಹೇಳಿ ಆಗ ಲಕ್ಷ್ಮಣನಿಗೆ ವಿಶೇಷ ಲಜ್ಜೆಯಾಯಿತು.

ನೀತಿವಂತನಾದ ಭರತನಾದರೂ ರಾಮನ ಮನಸ್ಸನ್ನು ಒಲಿಸಿಕೊಳ್ಳಬೇಕೆಂದು ಧರ್ಮವನ್ನು ಪುರಸ್ಕರಿಸಿತನ್ನ ಸೈನ್ಯವನ್ನು ದೂರವಿರಿಸಿ ಮಿತ ಪರಿವಾರದೊಡನೆ ಅವನನ್ನು ಹುಡುಕುತ್ತಾ ಹೊರಟನು. ರಾಮನಪಾದವನ್ನು ಕಾಣುವ ವರೆಗೆ ತನಗೆ ಮನಶ್ಶಾಂತಿಯೇ ಇಲ್ಲವೆಂದು ಹೇಳಿಕೊಂಡು ಗುಹನ ಸಮೇತ ಅಲೆದು ಕೊನೆಗೆ ಪರ್ಣಶಾಲೆಯಲ್ಲಿ ಸೀತಾ ಸಮೇತನಾದ ರಾಮನನ್ನು ಕಂಡನು. ನೋಡಿ ತಕ್ಷಣವೇ ಒಂದು ಸಲ ಅಣ್ಣಾ ! ಎಂದು ಉಚ್ಚರಿಸಿ ಮುಂದಕ್ಕೆ ಮಾತನಾಡಲಾರದೆ ಅವನ ಮುಂಭಾಗದಲ್ಲಿದೆಯೇ ದೊಪ್ಪೆಂದು ಕೆಳಗೆ ಬಿದ್ದನು. ರಾಮನು ಅವನನ್ನು ಮೇಲಕ್ಕೆ ಎತ್ತಿ ಮುಂದಲೆಯನ್ನು ಆಘ್ರಾಣಮಾಡಿ ಆಲಿಂಗಿಸಿಕೊಂಡು, ಬಹುದೀರ್ಘವಾಗಿ ರಾಜಧರ್ಮದ ವಿಷಯವಾಗಿ ಪ್ರಶ್ನಿಸಿದನು ಭರತನು ಹೀಗೆಂದನು "ಅಣ್ಣಾ !ಧರ್ಮಭ್ರಷ್ಟನಾದ ನನಗೆ ಈ ಧರ್ಮೋಪದೇಶದಿಂದ ಆಗ ಬೇಕಾದುದೇನು? ಹಿರಿಯನಾದ ನೀನಿರುವಾಗ ಕಿರಿಯನು ದೊರೆಯಾಗಲಾರನೆಂಬುದು ನಮ್ಮ ಇಕ್ಷ್ವಾಕು ವಂಶದಲ್ಲಿ ನಡೆದು ಬಂದ ಧರ್ಮ, ನೀನು ಅಯೋಧ್ಯೆಗೆ ಬಂದು ಬಿಡು, ಅಲ್ಲಿ ಅಭಿಷೇಕವನ್ನು ಮಾಡಿಸಿಕೋ ನಮ್ಮ ವಂಶವು ಮುಂದುವರೆಯುವಂತೆ ಮಾಡು. ನಾನು ಊರಿನಲ್ಲಿ ಇಲ್ಲದಾಗ ನೀನು ಬಿಟ್ಟು ಬಂದಿರುವುದು ಸರಿಯಲ್ಲ, ನಿನ್ನ ವಿರಹವನ್ನು ಸಹಿಸದೆ ತಂದೆಯು ಮರಣ ಹೊಂದಿದನು ಎಲ್ಲರೂ

ಓದುಗರಿಗೆ, ಏಜಂಟರಿಗೆ

ಹಾರ್ದಿಕ

ದೀಪಾವಳಿ

ಶುಭಾಶಯಗಳು

—ಸಪ್ತಗಿರಿ.

ದುಃಖಿಸುತ್ತಿರುವರು” ಎಂದು ಪ್ರಾರ್ಥಿಸಿಕೊಂಡನು ಅಯೋಧ್ಯೆಯಿಂದ ಬಂದಿದ್ದ ವಸಿಷ್ಠಾದಿಗಳೆಲ್ಲ ಅದನ್ನು ಅನುಮೋದಿಸಿದರು. ಅಷ್ಟರಲ್ಲಿಯೇ ರಾಮನು ತಂದೆಯ ಮರಣವನ್ನು ಕೇಳಿ ದುಃಖಪಟ್ಟು ಜಲದಾನಾದಿಗಳನ್ನು ಮುಗಿಸಿದನು. ಆಗ ಅಲ್ಲಿ ನೆರೆದಿದ್ದ ಸಭೆಯಲ್ಲಿ ಭರತನು ಕೈ ಮುಗಿದುಕೊಂಡು ರಾಮನನ್ನು ಕುರಿತು ಹೇಳಿದನು” ಅಣ್ಣಾ! ನನ್ನ ತಾಯಿಯು ತಪ್ಪು ಮಾಡಿದುದರಿಂದ ತಂದೆಯು ಸ್ವರ್ಗಸ್ಥನಾದನು. ತಾಯಿಯು ವಿಧವೆಯಾದಳು ಅವಳಿಗೆ ನರಕಪ್ರಾಪ್ತಿಯಾಯಿತು. ನನಗೆ ಅಪಕೀರ್ತಿಯುಂಟಾಯಿತು ನಿನಗೆ ವನವಾಸ ಪ್ರಾಪ್ತವಾಯ್ತು ಧರ್ಮಕ್ಕೆ ಲೋಪ ಬಂದಿತು ತಾಯಿಯು ತಪ್ಪು ಮಾಡಿದಳು. ತಂದೆಯೂ ತಪ್ಪು ಮಾಡಿದನು. ಅದಕ್ಕಾಗಿ ನನ್ನನ್ನು ಬೇಕಾದರೆ ಶಿಕ್ಷಿಸು ರಾಜ್ಯವು ನಿನಗೆ ಸೇರಬೇಕಾದುದು ನಿನ್ನ ಸಾಮರ್ಥ್ಯಕ್ಕೆ ತಕ್ಕದ್ದು ಅಯೋಧ್ಯೆಗೆ ಬಂದು ರಾಜ್ಯಾಭಿಷಿಕ್ತನಾಗಿ ವಂಶದ ಮರ್ಯಾದೆಯನ್ನು ಉಳಿಸಿ ಎಲ್ಲ ಪ್ರಜೆಗಳ ಆಸೆಯನ್ನು ಕೈಗೂಡಿಸು” ಎಂದನು.

ಅದಕ್ಕೆ ಶ್ರೀರಾಮನು ಈರೀತಿ ಉತ್ತರಿಸಿದನು. ‘ತಮ್ಮಾ! ನೀನಾಡಿರುವುದು ನ್ಯಾಯವೇ ಆದರೆ ಸತ್ಯಾಂಶವನ್ನು ಕೇಳು, ನಮ್ಮ ತಂದೆಯಾದ ದಶರಥನು ನಿಮ್ಮ ತಾಯಿಯನ್ನು ಮದುವೆಯಾಗುವಾಗ ಅವಳ ತಂದೆಯಾದ ಅಶ್ವಪತಿ ತನ್ನ ಮಗಳಿಗೆ ಹುಟ್ಟಿದ ಮಗನಿಗೆ ರಾಜ್ಯವನ್ನು ಕನ್ಯಾಶುಲ್ಕವಾಗಿ ಕೊಡುವುದಾಗಿ ವಾಗ್ದಾನ ಮಾಡಿದ್ದನು. ಅಲ್ಲದೇ ಆದೇ ದಶರಥನು ದೇವಾಸುರ ಯುದ್ಧದಲ್ಲಿ ನಿಮ್ಮ ತಾಯಿಗೆ ಎರಡು ವರಗಳನ್ನು ಕೊಟ್ಟನು. ಆದರ ಪ್ರಕಾರ ನಿನ್ನ ತಾಯಿಯು ನಿನಗೆ ಅಯೋಧ್ಯೆಯ ಪಟ್ಟಾಭಿಷೇಕವನ್ನು ಮತ್ತೊಂದಕ್ಕೆ ನನ್ನ ವನವಾಸವನ್ನೂ ಪ್ರಾರ್ಥಿಸಿದಳು. ಅದರಂತೆ ನಮ್ಮ ತಂದೆಯು ನಿನಗೆ ರಾಜ್ಯಾಧಿಕಾರವನ್ನೂ ನನಗೆ ವನವಾಸವನ್ನೂ ಅನುಗ್ರಹಿಸಿದ್ದಾನೆ ಅವನ ಮಾತನ್ನು ನಡೆಸಿ ಅವನನ್ನು ಸತ್ಯವಂತನನ್ನಾಗಿ ಮಾಡುವುದು ನಮ್ಮಿಬ್ಬರಿಗೂ ಕರ್ತವ್ಯ. ಆದುದರಿಂದ ನೀನು ಶತ್ರುಘ್ನನ ಸಹಾಯದಿಂದ ಅಯೋಧ್ಯೆಯನ್ನು ಪಾಲಿಸು. ನಾನು ಲಕ್ಷ್ಮಣನ ಸಹಾಯದಿಂದ ಅರಣ್ಯವಾಸದಲ್ಲಿ ಸುಖವಾಗಿರುವೆನು. ನಾವಿಬ್ಬರೂ ಸೇರಿ ತಂದೆಯ ಸತ್ಯಸಂಧತೆಯನ್ನು ಸ್ಥಾಪಿಸೋಣ” ಎಂದನು. ಈ ಮಾತು ಅಲ್ಲಿ ನೆರೆದಿದ್ದವರೆಲ್ಲರಿಗೂ ಹಿತಕರವಲ್ಲದಿದ್ದರೂ ಬಹು ಮೆಚ್ಚುಗೆಯಾಗಿತ್ತು. ಭರತನೂ ಅವರೂ ರಾಮನನ್ನು ಅಯೋಧ್ಯೆಗೆ ಹಿಂತಿರುಗಲೇ ಬೇಕೆಂದು ಒತ್ತಾಯ ಪಡಿಸಿದರು

ಆದರೆ ರಾಮನು ಅದಕ್ಕೆ ಒಪ್ಪದೇ ಹೀಗೆಂದು ಉತ್ತರಿಸಿದನು.

ಸತ್ಯಮೇವಾನೃಶಂಸಶ್ಚ
ರಾಜವೃತ್ತಂ ಸನಾತನಂ।
ತಸ್ಮಾತ್ ಸತ್ಯಾತ್ಮಕಂ ರಾಜ್ಯಂ
ಸತ್ಯೇ ಲೋಕಃ ಪ್ರತಿಷ್ಠಿತಃ॥
ಸತ್ಯಮೇವೇಶ್ವರೋ ಲೋಕೇ
ಸತ್ಯೇ ಪದ್ಮಾ ಪ್ರತಿಷ್ಠಿತಾ।
ಸತ್ಯ ಮೂಲಾನಿ ಸರ್ವಾಣಿ
ಸತ್ಯಾನ್ನಾಸ್ತಿ ಪರಂ ಪದಂ

ಆದುದರಿಂದ ತಂದೆಯ ಸತ್ಯವನ್ನು ಪರಿಪಾಲಿಸಿಯೇ ತೀರಬೇಕು. ಅಣ್ಣ ತಮ್ಮಂದಿರಿಬ್ಬರು ನಿಷ್ಠೆಯಿಂದ ಪಾಲಿಸಬೇಕು. ಈ ಮಾತನ್ನು ಕೇಳಿ ಅಲ್ಲಿ ನೆರೆದಿದ್ದವರೂ ವಸಿಷ್ಠಾದಿಗಳೂ ತಮ್ಮ ತಮ್ಮ ವಾದದಿಂದ ರಾಮನನ್ನು ಒಪ್ಪಿಸಲು ಪ್ರಯತ್ನಪಟ್ಟರು. ಭರತನು ರಾಮನು ಅಯೋಧ್ಯೆಗೆ ಬರದಿದ್ದರೆ ತಾನು ಪ್ರಾಯೋಪವೇಶ ಮಾಡುವುದಾಗಿ ಹಠ ಹಿಡಿದನು. ಅಲ್ಲದೆ ವನವಾಸಕ್ಕೆ ಹೋಗಿಯೇ ತೀರಬೇಕಾದರೆ ನಾನೂ ಶತ್ರುಘ್ನನೊಡನೆ ವನವಾಸಕ್ಕೆ ಹೋಗುತ್ತೇನೆ, ರಾಮನು ಪಟ್ಟಾಭಿಷಿಕ್ತನಾಗಲಿ ಎಂದು ಸೂಚಿಸಿದನು ಆಗ ರಾಮನು “ಹೆಚ್ಚು ಮಾತುಗಳಿಂದ ಏನು ಪ್ರಯೋಜನ? ಚಂದ್ರಿಕೆಯು ಚಂದ್ರನನ್ನು ಬಿಡಬಹುದು ಹಿಮವಂತನು ಹಿಮವನ್ನು ಬಿಡಬಹುದು ಸಮುದ್ರವು ತನ್ನ ಎಲ್ಲೆಯನ್ನು ಮೀರಬಹುದು. ನಾನು ಮಾತ್ರ ಮಾತ್ರ ಮಾಡಿದ ಪ್ರತಿಜ್ಞೆಯನ್ನು ಮೀರಲಾಗುವುದಿಲ್ಲ, ನಿನ್ನ ತಾಯಿಯಾದ ಕೈಕೇಯಿಯು ನಿನ್ನ ಮೇಲಿನ ಪ್ರೀತಿಯಿಂದಲೋ ರಾಜ್ಯದ ಆಸೆಯಿಂದಲೋ ಹೀಗೆ ವರವನ್ನು ಕೇಳಿದಳು, ತಂದೆಯು ಅದಕ್ಕೆ ಒಪ್ಪಿದನು, ನೀನು ಅದರಂತೆ ರಾಜನಾಗಬೇಕಾದುದು ನಿನ್ನ ಕರ್ತವ್ಯ ಆದರೆ ಅವಧಿಯು ಮೀರುವವರೆಗೆ ನಾನು ಅಯೋಧ್ಯೆಗೆ ಕಾಲಿಡಲು ಸಾಧ್ಯವಿಲ್ಲ ಅವಧಿಯು ಕಳೆದ ಮೇಲೆ ಅಯೋಧ್ಯೆಗೆ ಬಂದು ರಾಜ್ಯಭಾರವನ್ನು ವಹಿಸಿಕೊಳ್ಳುತ್ತೇನೆ” ಎಂದನು. ಆದರಿಂದ ಎಲ್ಲರಿಗೂ ಸ್ವಲ್ಪ ಮಟ್ಟಿಗೆ ಸಮಾಧಾನವಾಯ್ತು ತಕ್ಷಣವೇ ಭರತನು ವಸಿಷ್ಠರ ಸೂಚನೆಯಂತೆ ರಾಮನ ಮುಂದೆ ಪಾದುಕೆಯನ್ನಿಟ್ಟ ಆದರ ಮೇಲೆ ಪಾದವನ್ನಿಡ ಬೇಕೆಂದು ಅದೇ ಹದಿನಾಲ್ಕು ವರ್ಷಗಳ ರಾಜ್ಯಪಾಲನೆ ಮಾಡುವುದೆಂದು ಆಕಾಲದಲ್ಲಿ ಜಟಾಧಾರಿಯಾಗಿ ಗ್ರಾಮಾದ್ಬಹಿ ವಾಸಿಸುವನೆನೆಂದೂ ಹೇಳಿಕೊಂಡನು. ರಾಮನು ಹಾಗೆಯೇ ಮಾಡಲು ಭರತನು ಅದನ್ನು ಶಿರಸಾವಹಿಸಿ ಸರ್ವರೊಂದಿಗೂ ಅಯೋಧ್ಯೆಗೆ ಹಿಂತಿರುಗಿ ದಾರಿಯಲ್ಲಿ ಭರದ್ವಾಜರನ್ನು ಕಂಡು ಅವರಿಗೆ ನಡೆದ ಸಂಗತಿಯನ್ನೆಲ್ಲಾ ತಿಳಿಸಿ ಅಯೋಧ್ಯಾ ಪಟ್ಟಣವನ್ನು ಸೇರಿದನು. ಅಲ್ಲಿ ಬಹಳ ವೈಭವದಿಂದ ಪಾದುಕಾ ಪಟ್ಟಾಭಿಷೇಕವನ್ನು ನಡೆಸಿ, ನಂದಿಗ್ರಾಮದಲ್ಲಿ ಇದ್ದುಕೊಂಡು ರಾಜ್ಯವನ್ನು ತನ್ನಲ್ಲಿಟ್ಟ ನ್ಯಾಸವೆಂದು ಭಾವಿಸಿ ಪ್ರತಿದಿನದ ವ್ಯವಹಾರಗಳನ್ನು ಅದಕ್ಕೆ ನಿವೇದಿಸಿ ರಾಜ್ಯವಾಳುತ್ತಿದ್ದನು

ಹದಿನಾಲ್ಕು ವರ್ಷಗಳು ಮುಗಿಯುವ ದಿನ ರಾಮನು ತನ್ನ ಆಗಮನವನ್ನು ಹನುಮಂತನ ಮೂಲಕ ಭರತನಿಗೆ ತಿಳಿಯಪಡಿಸಿದನು. ಆಗ ಭರತನಿಗೆ ಆದ ಸಂತೋಷ ಅವರ್ಣನೀಯ ರಾಮನನ್ನು ಕಂಡು ರಾಜ್ಯದ ಸಕಲ ಪದಾರ್ಥಗಳನ್ನು ಅವನಿಗೆ ಸ್ವಾಧೀನ ಪಡಿಸಿ ತಾನ ಕೃತಾರ್ಥನಾದನೆಂದು ಭಾವಿಸಿದನು ಕೊನೆಯಲ್ಲಿ ರಾಮನು ಲಕ್ಷ್ಮಣನನ್ನು ಯುವರಾಜನಾಗ ಬೇಕೆಂದು ಒತ್ತಾಯಪಡಿಸಿದರೂ. ಒಪ್ಪದಿರಲು ಭರತನು ತಾನು ಯುವರಾಜನಾಗಿ ತನ್ನ ಅಣ್ಣನಿಗೆ ಕೈಂಕರ್ಯ ಮಾಡಲು ಒಪ್ಪಿಕೊಂಡು, ತನ್ನ ಭ್ರಾತೃವಾತ್ಸಲ್ಯವನ್ನು ಪೂರ್ಣವಾಗಿ ಪ್ರದರ್ಶಿಸಿದನು.

ಇಷ್ಟಾದರೂ ವಾಲ್ಮೀಕಿ ಋಷಿಗಳು ಭರತನ ವಿಷಯದಲ್ಲಿ ಸೂಚಿಸಿರುವ ವಿಷಯಗಳು ಅರ್ಥವಾಗುವಂತಿಲ್ಲ. ಅನೇಕ ಸಂದರ್ಭಗಳಲ್ಲಿ ಅವನನ್ನು ಕಂಡವರೆಲ್ಲ ಅವನ ನಡತೆಯ ವಿಷಯದಲ್ಲಿ ಸಂದೇಹ ಪಡುತ್ತಾರೆ. ಮೊದಲು ದಶರಥನೇ ರಾಮನಿಗೆ ಯುವರಾಜ ಪಟ್ಟಾಭಿಷೇಕವನ್ನು ಭರತನಿಲ್ಲದೇ ಇರುವಾಗಲೇ ಮಾಡುವುದು ಉಚಿತವೆಂದು ಸೂಚಿತವಾಗಿದೆ. ಗುಹನು ಭರತನನ್ನು ನೋಡಿ ‘ನೀನು ರಾಮನಿಗೆ ಕೇಡನ್ನು ಮಾಡಲು ಬಂದಿರುವುದಿಲ್ಲ ತಾನೇ’ ಎಂದು ಪ್ರಶ್ನಿಸುತ್ತಾನೆ. ಇದೇ ಪ್ರಶ್ನ ಭರದ್ವಾಜರಿಂದಲೂ ಪುನರುಕ್ತವಾಗಿದೆ. ಭರತನು ಲಕ್ಷ್ಮಣನನ್ನು ಕಂಡಾಗ ಅವನು ತಮ್ಮನ್ನು ಸಂಹಾರಮಾಡುವುದಕ್ಕಾಗಿ ಬಂದಿರುವನೆಂದು ಭಾವಿಸಿ ಅವನೊಡನೆ ಯುದ್ಧ ಮಾಡಲು ಸಿದ್ಧವಾಗಿರಬೇಕೆಂದು ರಾಮನಿಗೆ ಸೂಚಿಸುವನು. ರಾಮನು ಅಯೋಧ್ಯೆಗೆ ಹಿಂತಿರುಗಿದ ದಿನದಲ್ಲಿ ಭರತನು ತನಗೆ ರಾಜ್ಯವನ್ನು ಹಿಂತಿರುಗಿಸಲು ಸಿದ್ಧನಿದ್ದಾನೆಯೇ ಎಂಬುದನ್ನು ರಹಸ್ಯವಾಗಿ ತಿಳಿದು ಬಾ ಎಂದು ಹೇಳಿ ಆಂಜನೇಯನನ್ನು ಕಳುಹಿಸುವನು. ಭರತನ ಸ್ಫಟಿಕ ಶುದ್ಧವಾದ ಶೀಲಕ್ಕೆ ಈ ಪ್ರಶ್ನೆಗಳು ಎಷ್ಟು ಉಚಿತವೂ ಎಂಬುದನ್ನು ಯೋಚಿಸಬೇಕಾಗುತ್ತದೆ ಅವನದು ಅತ್ಯಂತ ಶ್ರೇಷ್ಠವಾದ ಭ್ರಾತೃವಾತ್ಸಲ್ಯ. ಇದರಿಂದ ಭರತನು ರಾಮಾಯಣದ ಪಾತ್ರಗಳಲ್ಲೆಲ್ಲಾ ಶೋಭಾಯಮಾನವಾಗಿ ಕಾಣುತ್ತಾನೆ.



# ಶ್ರೀಭಾಷ್ಯ

ಎಂ. ಶ್ರೀನಿವಾಸ ಅಯ್ಯಂಗಾರ್

ಶ್ರೀಭಾಷ್ಯದಲ್ಲಿ ಭಗವದ್ರಾಮಾನುಜರು ತತ್ತ್ವದ ಸ್ವರೂಪವನ್ನು ಎರಡುವಿಧವಾಗಿ ಪ್ರಕಾಶಪಡಿಸಿದ್ದಾರೆ. ಮೊದಲಯನೆದಾಗಿ ವ್ಯಧಿಕರಣ ವೃತ್ತಿ ಪ್ರಯೋಗವನ್ನು ಬಳಸಿದ್ದಾರೆ. ಇದು ಭಕ್ತಿಮಾರ್ಗದ ರೀತಿಯಿಂದ ಉಪನಿಷತ್ತಿನಲ್ಲಿ ಎಷ್ಟಾಂತರವಾದ ವೇದಾವಿಗಳ ಅಭಿಪ್ರಾಯ. ಇವಕ್ಕೆ ಅತಿ ಮುಖ್ಯವಾದ ನಾಯಕತ್ವವನ್ನು ಸ್ವೀಕರಿಸಿದವರು ವಾತ್ಸ್ಯವರದಾಚಾರ್ಯರವರ ಅನುಗ್ರಹಬಲದಿಂದ ಹಯಗ್ರೀವನ ಪೋಷಣೆಯಿಂದ ಬೆಳೆದುಬಂದ ವಿಜಿಗೀಷು ವೇದಾಂತಾಚಾರ್ಯರು ಎರಡನೆಯದಾಗಿ ಸಮಾನಾಧಿಕರಣ ರೀತಿಯಿಂದಾಗಿ ಇದೇ ತತ್ತ್ವವನ್ನು ತೋರಿಸಿಕೊಟ್ಟಿರುವವರು ಪರಾಂಕುಶರ ಶಿಷ್ಯರಾದ ಶ್ರೀಮನ್ನಾಥಮುನಿಗಳು. ವ್ಯಧಿಕರಣ ರೀತ್ಯಾ ಚೇತನಾಚೇತನಾ ಸಂಬಂಧ ಅನಿಷ್ಟ, ಅಪಾಯಕರ ತ್ಯಾಗಾರ್ಹ. ಇದರ ಗುರಿ ಸನ್ಯಾಸ, ಸರ್ವಸಂಗ ಪರಿತ್ಯಾಗ, ಆದ್ದರಿಂದ ತುರೀಯಾಶ್ರಮವನ್ನು ಅವಲಂಬಿಸಿ ಪ್ರಾಕೃತ ಬಂಧವನ್ನು ನಿಶ್ಶೇಷವಾಗಿ ತೊಡೆದು ಭಗವತ್ಪ್ರಾಪ್ತಿಯನ್ನು ಹೊಂದಿ ಸುಖಪಡುವವನು ನಿಜವಾದ ಮುಕ್ತನೆನಿಸಿಕೊಳ್ಳುತ್ತಾನೆ. ಇದರಲ್ಲಿ ಪ್ರಕೃತಿ ವಿಮುಕ್ತನಾದ ಚೇತನ ಧರ್ಮಿಯಾಗಿ ಉಳಿದುಕೊಂಡು ತನ್ನ ಸಹಜಧರ್ಮವಾದ ಜ್ಞಾನಾನಂದದ ಪ್ರಯೋಜನವನ್ನು ಪೂರ್ಣವಾಗಿ ಹೊಂದಿ, ಮರುಕಳಿಸುದಂತೆ ಶಾಶ್ವತವಾಗಿ ಬಾಳಬಹುದಾದ ಸಂಭವ. ಇದಕ್ಕೆ ಪೂರ್ಣವಾಗಿ ಅವಕಾಶವನ್ನು ಏರ್ಪಡಿಸುವ ಒಂದು ಶಕ್ತಿ ವಿಶೇಷ. ಸ್ವತಃಸಿದ್ಧವಾದ ಈಶ್ವರ ಧರ್ಮದೊಂದಿಗೆ ಕೂಡಿದ ಜ್ಞಾನಾನಂದಮಯವಾದ ವಿಭುದ್ರವ್ಯ ಅದಕ್ಕೆ ಬ್ರಹ್ಮ, ಪುರುಷೋತ್ತಮ, ಆತ್ಮಾ, ಸತ್ ಚಿತ್ ಎಂಬುದಾಗಿ ಅನೇಕ ಹೆಸರುಗಳುಂಟು. ಶ್ರೀಭಾಷ್ಯದಲ್ಲಿ ಮೊದಲ ನೋಟಕ್ಕೆ ವಿಷಯವಾಗಿರುವುದು ಈ ಭಾವ ಪೂರ್ವಮೀಮಾಂಸೆಯಲ್ಲಿ ಚೇತನ ದ್ರವ್ಯ ತನ್ನ ಸಾಹಸದಿಂದ ಮತ್ತು ತನ್ನನ್ನು ಹೋಲುವ ಅತಿಶಯ ಶಕ್ತಿಯುಳ್ಳ ದೇವತೆಗಳ ಸಹಾಯದಿಂದ ಅನಂತಸ್ಥಿರವಾದ ಫಲವಾದುದನ್ನು ಹೊಂದಲಾರದುದರಿಂದ ತನ್ನ ಬದುಕಿನಲ್ಲಿ ನ್ಯೂನತೆಯನ್ನು ಪರಿಹರಿಸಿಕೊಳ್ಳುವದಕ್ಕೆ ದೇವೋತ್ತಮನ ಆಶ್ರಯವನ್ನು ಪಡೆಯಬೇಕಾದ್ದರಿಂದ ಅಂತಹ ದೇವದೇವೋತ್ತಮನ ಸ್ವರೂಪವನ್ನು ಅರಿತು ಅವನನ್ನು ಸಹಾಯಕ್ಕೆ ಬಯಸುವ ರೀತಿಯನ್ನು ತಿಳಿದುಕೊಳ್ಳಲು ಶಾರೀರಕ ಮೀಮಾಂಸೆಯಲ್ಲಿ ನಿಷ್ಕಲ್ಮಷ ಜ್ಞಾನವನ್ನು ಪಡೆಯಲು ಹವಣಿಸುತ್ತಾನೆ. ಆದ್ದರಿಂದ ಈ ದೃಷ್ಟಿಯಲ್ಲಿ ಪರಮಪುರುಷಾರ್ಥ ಪ್ರಾಕೃತವಾದ ಸಂಬಂಧದಿಂದ ಪರಿಮಿತವಾದ ಅನಿಷ್ಟ ಮಿಶ್ರವಾದ ತನ್ನ ಸ್ಥಿತಿಯನ್ನು ತ್ಯಜಿಸಿ ಪರಮ ಪ್ರೇಮಾಸ್ಪದವಾದ ತನ್ನ ಜ್ಞಾನಾನಂದ ವಿಕಾಸವನ್ನು ಪಡೆಯುವುದೇ ಗುರಿ ಈ ಅಂಶವನ್ನು ಶ್ರೀಭಾಷ್ಯಗ್ರಂಥ ಸ್ಪಷ್ಟವಾಗಿ ತಿಳಿಯಪಡಿಸುವುದರಿಂದ "ಅಖಿಲಂ, ಸರ್ವ ಸಮಂಜಸಂ" ಎಂಬ ಮೂರು ಪದವನ್ನು ಬಳಸುವ ಭಾಷ್ಯಕಾರರು ಒಬ್ಬ ವ್ಯಕ್ತಿಯನ್ನೂ ಬಿಡದೆ ಎಲ್ಲರಿಗೂ ಪೂರ್ಣಜ್ಞಾನಾನಂದ ಪ್ರಾಪ್ತಿ ಏರ್ಪಡುವುದೆಂದು ಹೇಳಿ ಗ್ರಂಥವನ್ನು ಸಮಂಜಸವಾದುದೆಂದು ಹೇಳಿ ಮುಗಿಸಿದ್ದಾರೆ

ಸಾಮಾನ್ಯಾಧಿಕರಣ್ಯರೀತಿಯಲ್ಲಿ ಚಿದಚಿತ್ ಸಂಬಂಧ ವಿಚಾರ ಪ್ರಧಾನವಲ್ಲ. ಅದರ ಸರ್ವೇಶ್ವರನ ಸಂಬಂಧ ಚಿದಚಿತ್ತುಗಳಿಗೆ ಏಕರೂಪವಾಗಿ ಇರುವುದರಿಂದ ಅದು ನಿತ್ಯವಾದುದರಿಂದ ಅವಿನಾಶವಾಗಿ ಅಪರಿತ್ಯಾಜ್ಯವಾಗಿ ಉಳಿದುಕೊಳ್ಳುತ್ತದೆ. ಆ ಸಂಬಂಧದ ಪ್ರಕಾರ ಚೇತನವಸ್ತು ಅಚೇತನದಂತೆಯೇ ಏಕೈಕದ್ರವ್ಯವಾದ ಪರಬ್ರಹ್ಮನಿಗೆ ಸರ್ವವಿಧದಲ್ಲಿಯೂ ಬದ್ಧಪಟ್ಟಿರುವುದರಿಂದ ವ್ಯಧಿಕರಣ ದೃಷ್ಟಿಯಲ್ಲಿ ತೋರಿಬಂದ ಚೇತನನ ಪೃಥಕ್ ಪ್ರವೃತ್ತಿ ಭಾವನೆಗೆ ಎಡೆಯಿಲ್ಲ. ಆದ್ದರಿಂದ ಈಶ್ವರನಿಗೆ ಸೇರಿದ ಪದಾರ್ಥಗಳು ನಿತ್ಯವೂ ತದೀಯತ್ವ ಭಾವನೆಯಿಂದ ಕೂಡಬಹುದೇ ವಿನಾ ಸ್ವತಂತ್ರವಾಗಿ ಸಂಬಂಧ ಕಲ್ಪನೆಗೆ ಅರ್ಹವಾಗುವುದಿಲ್ಲ. ಆದರ ಚೇತನಾಚೇತನ ವಸ್ತುಗಳ ಸಂಪರ್ಕಕ್ಕೆ ನ್ಯೂನತೆ ಇಲ್ಲದಂತೆ ಈಶ್ವರಸಂಕಲ್ಪದಿಂದ ಅದು ಏರ್ಪಟ್ಟುದರಿಂದ ಈಶ್ವರ ಸಂಕಲ್ಪ ಜ್ಞಾನಪೂರ್ವಕವಾಗಿ ಆ ಸಂಕಲ್ಪವನ್ನು ಉಳಿಸಿಕೊಳ್ಳಬೇಕು ಇದಕ್ಕೆ ಭಾಗವತ ಸಂಬಂಧ ತದೀಯತ್ವಭಾವ ಎಂದು ಹೆಸರು. ಇದನ್ನು ಮರೆತು ಕರೆಯುವುದು ಸಾಂಸಾರಿಕ ದೃಷ್ಟಿ, ಅಧಃಪತನಹೇತು, ಈಶ್ವರ ಸಂಕಲ್ಪ ವಿಘಾತವಾದ ಜ್ಞಾನಪ್ರವೃತ್ತಿ ಇದು ಚೇತನನಿಗೆ ಸೇರದ್ದು. ಈ ಲೋಪ ಚೇತನನು ಬಯಸಿದಲ್ಲ. ಈಶ್ವರನು ವಿನೋದಕ್ಕಾಗಿ ಏರ್ಪಡಿಸಿದ ಕ್ರಮ. ಅವನ ಲೀಲೆ ಪದಾರ್ಥಗಳು ಹದಗೆಟ್ಟರೆ ಆಗುವ ರೀತಿಯನ್ನು ಕಂಡು ನಗುವುದೇ ಮುಖ್ಯಗುರಿ. ಈ ವ್ಯಾಪಾರವನ್ನು ಕೈಗೊಳ್ಳುವುದಕ್ಕೆ ಕಾರಣ ಲೀಲೆ. ಆ ಲೀಲೆಯಲ್ಲಿ ಸಿಕ್ಕಿದ ಚೇತನನನ್ನು ಹದಕ್ಕೆತರುವ ಶಕ್ತಿಯುಳ್ಳ ಈಶ್ವರನು ಆ ಸಂದರ್ಭದಲ್ಲಿ ಕರುಣೆಯೆಂಬ ಶಬ್ದ ವಾಚ್ಯಳಾದ ಶ್ರೀದೇವಿಯನ್ನು ಬಳಸಿಕೊಳ್ಳುತ್ತಾನೆ ಆದ್ದರಿಂದ ಈಶ್ವರನಿಗೆ ವಿಭೂತಿಯಾಗಿ ತೋರುವ ಚೇತನಾಚೇತನವರ್ಗ ಇಬ್ಬಗೆಯಾಗಿದೆ. ಮೊದಲನೆಯದು ಭೋಗವಿಭೂತಿ. ಹದಗೆಡದಿರುವ ಪದಾರ್ಥಗಳ ಬಳಕೆ. ಇದು ಲೀಲಾವಿಭೂತಿ ಇದು ನಾಲ್ಕನೆಯ ಒಂದು ಭಾಗವಾಗಿರುತ್ತದೆ. ಈ ಲೀಲಾವಿಭೂತಿಯಲ್ಲಿ ತೋರಿದ ಅಸಾಮಂಜಸ್ಯವನ್ನು ಹೋಗಲಾಡಿಸಿ ಸಾಮಂಜಸ್ಯವನ್ನು ಸ್ಥಿರಪಡಿಸುವುದು ಭಗವಂತನ ವ್ಯಾಪಾರ. ಆದ್ದರಿಂದ ಲೀಲಾಪೂರ್ವಕವಾಗಿ ಭೋಗವನ್ನು ಅನುಭವಿಸುವ ಸರ್ವೇಶ್ವರನು ಉಭಯವಿಭೂತಿ ನಾಯಕನಾದ ಏಕಮಾತ್ರದ್ರವ್ಯ. ಇದನ್ನು "ಸದೇವ ಏಕಮೇವ ಮತ್ತು ಅದ್ವಿತೀಯ' ಎಂದು ಪರಿಗಣಿಸಲಾಗಿದೆ ಮತ್ತು "ಸರ್ವಂ ಖಲು ಇದಂ ಬ್ರಹ್ಮ, ತಜ್ಜಲಾನ್ ಇತಿ ಶಾಂತ ಉಪಾಸೀತ'' ಎಂದು ಚೇತನನಿಗೆ ನೋಟನೆಲೆ

(28 ನೇ ಪುಟ ನೋಡಿ)

ತ್ರಿಪದಿಯಲ್ಲಿ ತ್ರಿವಿಕ್ರಮನಾದ ಸರ್ವಜ್ಞಕವಿ ಅನುಭವಿ, ಸತ್ಯಪ್ರೇಮಿ, ಖಂಡಿತವಾದಿ, ವಿಶಾಲ ಮನಸ್ಕ, ವಿರಕ್ತ ಹಾಗೂ ವಿವೇಕಿಯಾಗಿ ಮೆರೆದ. ಕನ್ನಡಸಾಹಿತ್ಯದ ಘನತೆಯನ್ನು ಹೆಚ್ಚಿಸಿ, ಕನ್ನಡ ಸಾಹಿತ್ಯ ವಾಹಿನಿಗೆ ಮೆರುಗನ್ನು ತಂದು ಕೊಟ್ಟವನು. ಈತನು ಸ್ವತಂತ್ರ ಕಳೆಯುಳ್ಳ ಶ್ರೇಷ್ಠ ಕವಿಯಾಗಿ, ಶ್ರೇಷ್ಠ ದಾರ್ಶನಿಕನಾಗಿ, ಉತ್ತಮ ನೀತಿವಂತನಾಗಿ ಕನ್ನಡ ಸಾಹಿತ್ಯ ಸಂವೃದ್ಧಿಗೆ ಕಾರಣನಾದನು. ತಪ್ಪನ್ನು ಯಾರು ಮಾಡಿದರೂ ತಿರಸ್ಕರಿಸುವ ವ್ಯಕ್ತಿತ್ವವುಳ್ಳವನು. ಈತನ ತ್ರಿಪದಿಗಳು ಭಾವದಲ್ಲಿ, ಭಾಷೆಯಲ್ಲಿ, ಶೈಲಿಯಲ್ಲಿ, ವಚನ ವಾಙ್ಮಯವನ್ನು ಹೋಲುತ್ತವೆ. ಇಷ್ಟೇ ಅಲ್ಲ, ಅಲ್ಲಿನ ಷಟ್‌ಸ್ಥಳ, ಅಷ್ಟಾವರಣ, ಜಾತಿಭೇದ ನಿರಾಕರಣ, ಇತ್ಯಾದಿ ಶೈವ ಧರ್ಮದ ನಿರೂಪಣೆ ವಚನಗಳಷ್ಟೆ ಸಾರವತ್ತಾಗಿ, ಭಾವಗರ್ಭಿತವಾಗಿ ಪ್ರಭಾವಯುತವಾಗಿ ಸರ್ವಜ್ಞನ ತ್ರಿಪದಿಗಳಲ್ಲಿಯೂ ಕಾಣಬರುತ್ತವೆ. ಸರ್ವಜ್ಞನ ವಚನಗಳು ವಚನಗಳಿಗಿಂತಲೂ ಹೆಚ್ಚು ಸರಸವಾಗಿವೆ.

ಸರ್ವಜ್ಞ ಕವಿಯು 17–18ನೆಯ ಶತಮಾನಗಳ ಸಂಧಿಕಾಲದಲ್ಲಿದ್ದನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇವನ ಹೆಸರು, ಕಾಲ, ದೇಶ ಮತ್ತು ಮತಗಳಲ್ಲಿ ವಿವಾದವಿದೆ. ವೀರಶೈವಕವಿ, ಧಾರವಾಡ ಜಿಲ್ಲೆಯ ಮೈಸೂರು ಗ್ರಾಮದ ಬಸವರಸ ಮಲ್ಲಮ್ಮ ಎಂಬ ಆರಾಧ್ಯ ಬ್ರಾಹ್ಮಣ ದಂಪತಿಗಳಿಗೆ ಶಿವನ ವರದಿಂದ ಈತನು ಜನಿಸಿದನೆಂಬ ಕಥೆಯಿದೆ. ಅವನು ಸಣ್ಣ ವಯಸ್ಸಿನಲ್ಲಿಯೆ ಮನೆ ಬಿಟ್ಟು ಹೋಗಿರಬಹುದು.

ನೂಕಿದರು ಅವರಾಗ ಕುಹಕ
ತನದೊಳು ಬೇಗ
ಲೋಕದೊಳಗೆಲ್ಲ ಕಂಡುದನು ನುಡಿದು ತಾ
ನೇಕವಾಗಿಹನು ಸರ್ವಜ್ಞ ॥

ಈ ವಚನ ಸಾಭಿಪ್ರಾಯವಾಗಿದೆ. ಕಂಡದ್ದನ್ನು ಆಡುವ ಅವನ ಸ್ವಭಾವವು ಮನೆ ಬಿಡಿಸಿತು. ಬಾಳಿನ ಬಗ್ಗೆ ಕಹಿ ಹೆಚ್ಚು ಅವನು ಸಮಾಜ ವೈರಿಯಾಗಿ ಅಲೆಯಬಹುದಾಗಿತ್ತು ಆದರೆ ಸದ್ಗುರುವಿನ ಲಾಭದಿಂದ ಅವನ ಬುದ್ಧಿ ಬೆಳೆಯಿತು ವಿವೇಕ-ಜಾಗೃತವಾಯಿತು. ಕಹಿ ಹೋಗಿ ಸಿಹಿ ಯಾಯಿತು. ಬಾಳನ್ನು ಅವನು ಪ್ರೀತಿಸ ಹತ್ತಿದನು. ಊರೂರು ಸುತ್ತಿ ಎಲ್ಲರೂ ತನ್ನವರೇ ಎಂಬ ಉದಾತ್ತ ಭಾವವನ್ನು ಬೆಳಸಿಕೊಂಡನು. ಅವನು ಸ್ವಾರ್ಥರಹಿತನೂ ವೈರಾಗ್ಯಪೂರ್ಣನೂ ಆದನು. ಅವನ ಒಳಗಣ್ಣು ತೆರೆಯಿತು. ರಾಗ ದ್ವೇಷರಹಿತನಾಗಿ ಜೀವನದ ಸತ್ಯವನ್ನು ಅವನು ಕಂಡನು. ಕಂಡದ್ದನ್ನು ಆಡಬೇಕಾದರೆ ಕಂಡದ್ದು ಸತ್ಯವಾಗಿರಬೇಕು ಸತ್ಯವನ್ನು ಕಾಣುವುದಕ್ಕೆ ಶುದ್ಧ ಪ್ರೀತಿ ಬೇಕು, ದೃಢ ವೈರಾಗ್ಯ ಬೇಕು, ನಿರ್ಭೀತಿ ಬೇಕು. ಸರ್ವಜ್ಞನು ಬೆಳೆದಂತೆ ಅಂಥ ಸತ್ಯದರ್ಶಿಯೂ ಖಂಡಿತವಾದಿಯೂ ಆದನು.

ಸರ್ವಜ್ಞನು ಕ್ರಾಂತಿಮೂರ್ತಿ, ಯಾರ ಹಂಗಿಗೂ ಒಳಗಾದವನಲ್ಲ ಕಂಡದ್ದನ್ನು ಕಂಡಂತೆ ಹೇಳುವಂಥ ಆಂತರಿಕ ಶಕ್ತಿ ಆತನಿಗೆ ದೈವದತ್ತವಾಗಿ ಬಂದಿತ್ತು. ಸರ್ವಜ್ಞನ ವಚನಗಳನ್ನು ಗುರು ಪದ್ಧತಿ, ಲಿಂಗಪದ್ಧತಿ, ಭಕ್ತಿಪದ್ಧತಿ, ಜ್ಞಾನಪದ್ಧತಿ, ಯೋಗಪದ್ಧತಿ, ರಾಜನೀತಿಪದ್ಧತಿ ಮತ್ತು ದೇಶಪದ್ಧತಿ ಇತ್ಯಾದಿಯಾಗಿ 33 ಭಾಗಗಳನ್ನಾಗಿ ಮಾಡಬಹುದು.

ಕನ್ನಡದ ಸರ್ವಸ್ವವನ್ನು ಪುಟ್ಟ ತ್ರಿಪದಿಗಳಲ್ಲಿ ತುಂಬಿದ ದೊಡ್ಡ ಅನುಭಾವಿ ಕವಿಯೀತ ಕನ್ನಡ ಜನಪದ ಸಾಹಿತ್ಯಕ್ಕೆ ಉಸಿರಿನಂತಿರುವ ತ್ರಿಪದಿ ಛಂದಸ್ಸನ್ನು ಈತನಷ್ಟು ಉತ್ತಮವಾಗಿ ಪ್ರಯೋಗಿಸಿದವರಾರೂ ಇಲ್ಲವೆಂದು ಹೇಳಬಹುದು. ಸರ್ವಜ್ಞನು ಸಾಹಿತ್ಯವಿಷಯದಲ್ಲಿ



ಸಮಾಜವಿಷಯದಲ್ಲಿ ವಿಲಕ್ಷಣ ವ್ಯಕ್ತಿ. ಅನುಭವವೇ ಅವನ ವೇದ. ಜೀವನವೇ ಅವನ ಪಾಠಶಾಲೆ.

ಸರ್ವಜ್ಞನೇನು ಸಕಲ ಶಾಸ್ತ್ರ ಪಂಡಿತನಾಗಿರಲಿಲ್ಲ. ವೇದಾಂತ ಶಿರೋಮಣಿಯಾಗಿರಲಿಲ್ಲ. ಆದರೆ ಯುಗಯುಗದ ಜಾಣ್ಮೆಯೂ ಭಾರತೀಯ ಮತ್ತು ಕನ್ನಡ ಸಂಸ್ಕೃತಿಯ ಸಾರಾಯವು ಅವನಲ್ಲಿ ಮನೆ ಮಾಡಿತು. 'ಆತ್ಮನನ್ನು ಅರಿತರೆ ಇದನ್ನೆಲ್ಲ ಅರಿತಂತೆ' (ಆತ್ಮನಿ ಖಲ್ವರೇ ವಿದಿತೇ ಇದಂ ಸರ್ವಂ ವಿದಿತಂ) ಎಂದು ಉಪನಿಷತ್ತು ಹೇಳಿದ ರೀತಿಯಲ್ಲಿ ಅವನು ಸರ್ವಜ್ಞನಾದನು ಅವನಿಗೆ ಅದು ಸಾರ್ಥಕವಾದ ಬಿರುದಾಯಿತು. ಇಂಥ ಸರ್ವಜ್ಞನು ಸರ್ವ ಕಾಲದಲ್ಲಿಯೂ ಅರಿಯುತ್ತಲೇ ಹೋಗುತ್ತಾನೆ, ಗರ್ವರಹಿತನಾಗಿರುತ್ತಾನೆ ಎಂಬುದನ್ನೂ ಅವನು ತೋರಿದನು

ಸರ್ವಜ್ಞನ ತ್ರಿಪದಿಗಳಲ್ಲಿ ಕಥೆಯಿಲ್ಲ, ವರ್ಣನೆಯಿಲ್ಲ ಆದರೆ ಸಮಗ್ರ ಜೀವನ ಕಥೆ ಇಲ್ಲವೆ ಜೀವನಧರ್ಮ ಅವುಗಳಲ್ಲಿ ರೂಪುಗೊಂಡಿದೆ. ಜೀವನ ರಸಕ್ಕೆ ಪೋಷಕವಾಗಿದೆ. ಅವು ಬರೀ ನೀತಿ ಬೋಧೆಗಳಾದವುಗಳಲ್ಲ. ಅನುಭವದ ವೇದ, ವಿವೇಕದ ವಾಣಿ ಅವುಗಳಲ್ಲಿದೆ ಕೆಲವು ಪದ್ಯಗಳಲ್ಲಿ ಇವು ಲೇಸು, ಇವು ಹೊಲ್ಲ ಎಂದು ಹೇಳುವಾಗ ಮಾತಿನ ಚತುರವಾದ ಜೋಡಣೆ, ಹಗುರವಾದ ನಗೆ ಮಾತ ... ವೆ ... ಅನೇಕ ವಚನಗಳಲ್ಲಿ ಸಮಾಜದ ಗುಣ ದೋಷಗಳ ಚಿತ್ರವಿದೆ, ವಿಡಂಬನೆ ... ಪ್ರಚೋದನೆಯಿದೆ ಯಾರ ಬಿಡೆ, ಮುರವತ್ತುಗಳಿಲ್ಲದೆ, ಮುಚ್ಚು ಮರೆಯಿಲ್ಲದೆ ಅವನು ಕಂಡದ್ದನ್ನಾಡಿದ್ದಾನೆ ಕನ್ನಡ ಸಾಹಿತ್ಯದಲ್ಲಿ ಇಷ್ಟು ಮಟ್ಟಿನ ಸ್ವಾತಂತ್ರ್ಯ, ಮನೋಧೈರ್ಯಗಳು ಬೇರೆಯವರಲ್ಲಿ ಕಾಣವು ... ಬ್ರಹ್ಮಶಿವನಂಥ ವಿಡಂಬನಕಾರರು ಕಟುವಾಗಿ ಕಡಿಸಿದಿದ್ದಾರೆ. ಆದರೆ ಅವರದು ಮತೀಯವಾದ ಮರ್ಯಾದಿತವಾಗ ದೃಷ್ಟಿ ತಮ್ಮ ಮತದ ವಿಷಯದಲ್ಲಿ ಪರತಂತ್ರರು, ಸಮಯಶರಣರು, ದೇವ, ಧರ್ಮ, ಪೂಜ, ಗುರು, ದಾನ, ಕುಲ, ಮತ, ನೀತಿ ಮುಂತಾದ ಅನೇಕ ವಿಷಯಗಳಲ್ಲಿ ಸರ್ವಜ್ಞನದು ಸಮಯಸ್ವತಂತ್ರವಾದ ಸಾರ್ವಕಾಲಿಕವಾದ ಮೌಲ್ಯ ಪ್ರಜ್ಞೆ

ಸರ್ವಜ್ಞ ಕವಿ ತನ್ನ ತ್ರಿಪದಿಗಳನ್ನು ಜ್ಞಾನ, ಜ್ಯೋತಿಯಾಗುವಂತೆ ಹೇಳಿದ್ದಾನೆ ಈತನು ನಿಶ್ಚಲ ಭಕ್ತಿಯಿಲ್ಲದವನು ಗುಡಿಯ ಪ್ರದಕ್ಷಿಣೆ ಹಾಕುವುದು ಎತ್ತು ಗಾಣವನ್ನು ಹೊತ್ತು ತಾ ಸುತ್ತಿ ಬಂದಂತೆ ವ್ಯರ್ಥವೆಂದು ಹೇಳಿದ್ದಾನೆ ಸ್ನಾನ

ಶ್ರೀಮತಿ ಎ. ಎಸ್. ಪಂಕಜ



ಕೋಲಾರದಲ್ಲಿರುವ ಸರ್ವಜ್ಞ ವಿಗ್ರಹ
ಚಿತ್ರ. ಜಿ ಸೋಮಶೇಖರ್

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ,

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು· ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

ಗಂಧ, ವಿಭೂತಿಗಳ ಧಾರಣೆಗಳಿಂದ ಸದ್ಗತಿ ದೊರೆಯುವಂತಿದ್ದರೆ 'ಜಲದಲಿಪ್ಪ ಕಪ್ಪೆ, ಸಾಣೆ ಕಲ್ಲು, ಕತ್ತೆಗಳು ಏತಕ್ಕೆ ಸ್ವರ್ಗಕ್ಕೆ ಏರಬಾರ ದೆಂದು' ಆತನ ಸವಾಲು. ಆದರಿಂದ ಸದ್ಗತಿಯು ದೊರೆಯಬೇಕಾದರೆ ಅರಿಷಡ್ವರ್ಗಗಳನ್ನು ಜಯಿಸ ಬೇಕೆಂದು ಹೇಳಿದ್ದಾನೆ:—

ಕಣ್ಣು ಮನ ನಾಲಿಗೆಯು ತನ್ನವೆಂದೆನಬೇಡ
ಅನ್ಯರು ಕೊಂದರೆನಬೇಡ ಈ ಮೂರು
ತನ್ನ ಕೊಂದಾವು ಸರ್ವಜ್ಞ'

ಎಂದು ಹೇಳಿ ಕಣ್ಣು, ನಾಲಿಗೆ ಮತ್ತು ಮನಸ್ಸು ಮನುಷ್ಯನ ನಾಶಕ್ಕೆ ಮೂಲ ಕಾರಣಗಳು, ಆದ್ದ ರಿಂದ ಪಂಚೇಂದ್ರಿಯಗಳನ್ನು ನಮ್ಮ ಹಿಡಿತ ದಲ್ಲಿಟ್ಟುಕೊಳ್ಳಬೇಕೆಂದು ಹೇಳಿದ್ದಾನೆ.

ಕೋಪವೆಂಬುದು ಕೇಳಿ ಪಾಪದ ನೆಲೆಗಟ್ಟು
ಕೂಪದೊಳು ನೇಣು ಹರಿದಂತೆ ನರಕಕ್ಕೆ
ಕೋಪಿ ತಾನಿಳಿವ ಸರ್ವಜ್ಞ

ಎಂದು ಹೇಳಿ, ಕೋಪವುಳ್ಳವನ ದೇಹ ಹಾವಿನ ಹುತ್ತವಿದ್ದಂತೆ ಎಂದು ಹೇಳಿದ್ದಾನೆ. ಈತನು ವೈದ್ಯ, ಜ್ಯೋತಿಷ್ಯ, ವೇಶ್ಯಾಪದ್ಧತಿ, ರಾಜನೀತಿ ಮತಾಂಧತೆ ಮತ್ತು ಆಡಂಬರ—ಇತ್ಯಾದಿ ವಿಷಯ ಗಳನ್ನು ಕುರಿತು ಬರೆದಿದ್ದಾನೆ. ಈತನು ಉತ್ತಮ ಹೋಲಿಕೆಗಳನ್ನು ಕೊಟ್ಟು ತ್ರಿಪದಿಗಳನ್ನು ರಚಿ ಸಿದ್ದಾನೆ. ಸಜ್ಜನರ ಸಂಗವದು ಹೆಜ್ಜೇನು ಉಂಡಂತೆ, ದುರ್ಜನರ ಸಂಗ ಬಚ್ಚಲಿನ ರೊಚ್ಚಿ ನಂತೆ, ಕೊಡದ ಲೋಭಿಯಾ ಮಾತು ಕೊಡ ಲಿಯಾ ಗಾಯ, ದೌರ್ಜನ್ಯಕಾರಿ ಸತ್ತರೆ ಹತ್ತಿರ್ದ ಕಜ್ಜಿ ಹೋದಂತೆ; ನೀಚರಾ ನೆರೆಗಿಂತ ಈಚಲದ ಮರ ಲೇಸು; ಹಂದಿಗಂದಣವೇಕೆ, ಹಂಗಿನಾ ಹಾಲಿಗಿಂದಂಬಲಿಯು ತಿಳಿ ಲೇಸು; ಕಳ್ಳನಾ ಮಾತು ಕೆಸರೊಳಗೆ ಮುಳ್ಳು ತುಳಿದಂತೆ; ಓದಿದಾ ಓದು ತಾ ವೇದ ಕಬ್ಬಿನ ಸಿಪ್ಪೆ, ಹೊತ್ತಿ ಗೊದಗದ ಮಾತು ಸತ್ತವನು ಎದ್ದಂತೆ; ಮಾತು ಬಲ್ಲಾತಂಗೆ ಯಾತವದು ಸುರಿದಂತೆ, ಕೋಟಿ ವಿದ್ಯೆಗಳಲ್ಲಿ ಮೇಟಿವಿದ್ಯೆಯೆ ಮೇಲು; ಮಕ್ಕಳಿಲ್ಲದ ಮನೆಯು ಪಕ್ಷಿಯಿಲ್ಲದ ವನ—ಇಂತಹ ಉತ್ತಮ ಮತ್ತು ಸುಲಭವಾದ ಉಪಮಾನಗಳನ್ನು ಬಳಸಿ ತನ್ನ ಅಭಿಪ್ರಾಯವನ್ನು ಕೇಳುವವರಿಗೆ ಮನ ದಟ್ಟಾಗುವಂತೆ ವರ್ಣಿಸಿದ್ದಾನೆ. ಈತನ ಮಾತು ಗಳು ಅರ್ಥಯುಕ್ತವಾಗಿಯೂ, ಭಾವಯುಕ್ತ ವಾಗಿಯೂ ಮತ್ತು ಧ್ವನಿಯುಕ್ತವಾಗಿಯೂ, ಗಾದೆ ಗಳಂತೆ ಸಾರವತ್ತಾಗಿವೆ. ಈತನು ಅನೇಕ ಕಡೆ ವಿಡಂಬನೆ ಮಾಡಿದರೂ ಯುಕ್ತವಾಗಿದ್ದು, ನಾವು ಕನ್ನಡಿಯಲ್ಲಿ ನಮ್ಮ ವಿಕೃತಿಯನ್ನು ನೋಡಿ ಕೊಂಡಂತೆ ಸ್ಪಷ್ಟ ಚಿತ್ರಣದಿಂದ ಕೂಡಿದೆ.

ಸಮಾಜದ ಗುಣ ದೋಷಗಳನ್ನು ಕವಿಯ ಮುಚ್ಚು ಮರೆಯಿಲ್ಲದೆ ಖಂಡಿಸಿದ್ದಾನೆ ಸರ್ವಜ್ಞ ಕವಿಯು ದಾರ್ಶನಿಕ, ಕವಿ, ಅವನ ನೀತಿ ಬರಡು ಮಾತಲ್ಲ, ರಸಮಯವಾದ ಸುಭಾಷಿತಗಳು ಹಾಸ್ಯವು ಕರುಣಾಶಾಲಿಯ ಶಲ್ಯತಂತ್ರ ಎಂದು ದ ರಾ ಬೇಂದ್ರೆಯವರು ಹೇಳಿದ್ದಾರೆ. 'ಸರ್ವ ಜ್ಞನ ಕಾವ್ಯ ಒಟ್ಟಿನ ಮೇಲೆ ನೀತಿಕಾವ್ಯ, ರಸಿಕ ತೆಯು ಕವಿಯ ಜೀವ. ಅದು ಸರ್ವಜ್ಞನಲ್ಲಿ ಬೇಕಾದಷ್ಟಿದೆ ಆದ್ದರಿಂದ ಅವನ ನೀತಿಕಾವ್ಯವು ಕಾವ್ಯವಾಗಿದೆ, ಉತ್ತಮ ಕಾವ್ಯವಾಗಿದೆ ಎಂದು ಎ. ಆರ್. ಕೃಷ್ಣಶಾಸ್ತ್ರಿಗಳು ಅಭಿ ಪ್ರಾಯಪಟ್ಟಿದ್ದಾರೆ ತಮಿಳಿನ ಕುರಳ್ ಕಾವ್ಯಕ್ಕೂ ತೆಲುಗಿನ ವೇಮನ ಕಾವ್ಯಕ್ಕೂ ಸರ್ವಜ್ಞನ ವಚ ನಗಳನ್ನು ಹೋಲಿಸಿ 'ಸರ್ವಜ್ಞನು ಕನ್ನಡಿಗರ ತಿರುವಳ್ಳುವರ್, ಕನ್ನಡಿಗರ ವೇಮನ ಅವರಂತೆ ಇವನಿಗೂ ನೀತಿ ಸಾಹಿತ್ಯದಲ್ಲಿ ಉಚ್ಚಸ್ಥಾನವು ಸಲ್ಲುತ್ತದೆ'. ಎಂದಿದ್ದಾರೆ

ಕವಿಯು ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ? ಎಂಬ ವಾಕ್ಯದಿಂದ ಜಾತಿವೈಷಮ್ಯ ಗಳು ಬೇಡವೆಂದು ಬೋಧಿಸಿದ್ದಾನೆ 'ಆಳಾಗ ಬಲ್ಲವನು ಆಳುವನು ಅರಸಾಗಿ' ಎಂಬ ವಾಕ್ಯ ದಿಂದ ಕಾರ್ಯತತ್ಪರತೆಯನ್ನು ನಿರ್ದೇಶಿಸಿದ್ದಾನೆ.

ಸರವೆ ಸುರಲತೆಯುಕ್ಕು ಗೊರವ
ಸುರಪತಿಯುಕ್ಕು
ಹರಕೊಟ್ಟ ಗರಿಯು ಗಿರಿಯುಕ್ಕು ಗುರುವಿನಾ
ಕರುಣವಿರುವ ತನಕ ಸರ್ವಜ್ಞ

ಎಂಬವಚನದಿಂದ ದೈವಭಕ್ತಿಯ ಮಹಿಮೆಯನ್ನು ಹೊಗಳಿದ್ದಾನೆ ಕಿರಿದರೊಳು ಪಿರಿದರ್ಥವನೆಪೇಳ್ವುದು ಸರ್ವಜ್ಞಕವಿಯ ಪ್ರತಿಭೆ ಇದೇ ತ್ರಿಪದಿಯ ತ್ರಿವಿಕ್ರಮತೆ ಅಚ್ಚಕನ್ನಡದ ಸೊಬಗು ಈ ತ್ರಿಪದಿಗಳಲ್ಲಿ ಭವ್ಯವಾಗಿದೆ. ಕವಿಯ ವಚನಗಳು ಜನತೆಯ ಜ್ಞಾನಕೋಶವಾಗಿವೆ; ಗಾದೆ ಮಾತುಗಳಾಗಿವೆ ಕನ್ನಡ ಸಾಹಿತ್ಯದ ದೇಸಿ ತತ್ತ್ವವು ಸರ್ವಜ್ಞ ಕವಿ ಯಲ್ಲಿ ಸಾರ್ಥಕತೆಯನ್ನು ಪಡೆದಿದೆ ಒಟ್ಟಿನಲ್ಲಿ ಸರ್ವಜ್ಞ ಕವಿಯು ತೆಲುಗಿನ ವೇಮನನಂತೆ, ತಮಿಳಿನ ತಿರುವಳ್ಳುವರ್‌ರಂತೆ, ಹಿಂದಿಯ ಕಬೀರದಾಸರಂತೆ ಧರ್ಮ ತತ್ತ್ವ ಮತ್ತು ನೀತಿ ಗಳ ಬೋಧಕನಾಗಿ ಕನ್ನಡಸಾಹಿತ್ಯದಲ್ಲಿ ಸ್ತುತ್ಯರ್ಹನಾಗಿದ್ದಾನೆ

*

## ಸರ್ವಜ್ಞ ವಚನಾಮೃತ

ಆದೇವ ಈದೇವ ಮಾದೇವನೆನಬೇಡ
ಆದೇವರಾದೇವ ಭುವನದಾ ಪ್ರಾಣಿಗಳಿ
ಗಾದವನೆ ದೇವ ಸರ್ವಜ್ಞ ॥ ೧ ॥

ತಂದೆಗೂ ಗುರುವಿಗೂ ಒಂದು ಅಂತರವುಂಟು
ತಂದೆ ತೋರುವನು ಸದ್ಗುರುವ ಗುರುರಾಯ
ಬಂಧನವ ಕಳೆವ ಸರ್ವಜ್ಞ ॥ ೨ ॥

ಬಲ್ಲೆನೆಂಬುವ ಮಾತು ಎಲ್ಲವೂ ಹುಸಿಕಾಣೊ
ಬಲ್ಲರೆ ಬಲ್ಲೆನೆನಬೇಡ ಸುಮ್ಮನಿರ
ಬಲ್ಲವನೆ ಬಲ್ಲ ಸರ್ವಜ್ಞ ॥ ೩ ॥

ಮನದಲ್ಲಿ ನೆನೆವವಗೆ ಮನೆಯೇನು ಮಠವೇನು
ಮನದಲ್ಲಿ ನೆನೆಯದಿರುವವನು ದೇಗುಲದ
ಕೊನೆಯಲಿದ್ದೇನು ಸರ್ವಜ್ಞ ॥ ೪ ॥

ಬೆಚ್ಚನೆಯ ಮನೆಯಾಗೆ ವೆಚ್ಚಕ್ಕೆ ಹೊನ್ನಾಗೆ
ಇಚ್ಛೆಯನರಿವ ಸತಿಯಾಗೆ ಸ್ವರ್ಗಕ್ಕೆ
ಕಿಚ್ಚು ಹಚ್ಚೆಂದ ಸರ್ವಜ್ಞ ॥ ೫ ॥

ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು
ತನ್ನಂತೆ ಪರರ ಬಗೆದಡೆ ಕೈಲಾಸ
ಬಿನ್ನಾಣವಕ್ಕು ಸರ್ವಜ್ಞ ॥ ೬ ॥

# ದೀಪಾವಳಿ



ದೀಪಾನಾಂ ಆವಲಿಃ
ದೀಪಗಳ ಸಮುದಾಯ ದೀಪಾವಳಿ–
ಹೌದು.

ರಾತ್ರಿಯಾದೊಡನೆಯೇ ನಾವಂದು ನಮ್ಮ ಮನೆಯಂಗಳದಲ್ಲಿ ನಿಂತು ನೋಡಿದರೆ ಕಾಣಸಿಗುತ್ತದೆ, ಸುತ್ತುಮುತ್ತೆಲ್ಲಾ ಮಿಣುಕು ನಕ್ಷತ್ರ ಮಾಲಿಕೆಗಳಂತೆ

ಹಣತೆ ದೀಪಗಳು, ಕೋಲು ದೀಪಗಳು, ಮೇಣದ ಬತ್ತಿಗಳು–ನಯನಾಜೂಕಾಗಿ ಚಿತ್ರ ವಿಚಿತ್ರವಾಗಿ ಬಣ್ಣಬಣ್ಣದ ಕಾಗದಗಳಿಂದ, ಕೋರದಬಟ್ಟೆಗಳಿಂದ ತಯಾರಿಸಿದ ಗೂಡುದೀಪ ದೊಳಗಿನ ಎಲೆಕ್ಟ್ರಿಕ್ ಬಲ್ಬುಗಳು-

ನಕ್ಷತ್ರಕಡ್ಡಿಗಳು, ಬಿರುಸುಬಾಣಗಳು, ಮಾಲೆ ಪಟಾಕಿಗಳು!

ಆಹಾ, ಎನಿದರಸೊಗಸು ! ಸೊಬಗು! ಹೇಗನ್ನಿಸುವುದು ನಿಮಗೆ ?

ವರ್ಷೇ ವರ್ಷೇ ಬರುವ, ಬಂದಂತೆಯೇ ಹಿಂದೆ ಸರಿದು ಹೋಗುವ ಕಾಲಚಕ್ರದ ಈ ಹಬ್ಬಗಳು ಬಂದಾಗ ನಾವೇಕೆ ಹೀಗೆ ನಕ್ಕು ನಲಿಯುತ್ತೇವೆ ?

ನಮ್ಮ ಜೀವನದಲ್ಲಿ ನಡೆದಿರಬಹುದಾದ ಕಹಿ ಪ್ರಸಂಗ ಅಹಿತಕರ ಘಟನೆಗಳನ್ನು ಮರೆಯಲೆಂದೇ ?

ಸಿಹಿಯ ಪಾಯಸದೂಟ ಸಿಗುವುದೆಂದೇ ?

ಹಿರಿಯರ ಸಂಪ್ರದಾಯಬದ್ಧ ಆಚರಣೆಗಳಿಂದ ಪುನೀತಾತ್ಮರಾಗಲೆಂದೇ ?

ನಮ್ಮ ಜೀವನಪಥ ಮುಂದೆ ಯಾವ ರೀತಿಯಲ್ಲಿ ಮಾರ್ಪಾಡಾಗುವುದೋ ಗೊತ್ತಿಲ್ಲ.

ಇಂದಿರುವ ನಾವು ಇಂದಾಗಿ ಬಂದಿರುವ ಇಂದನ್ನು ಹಬ್ಬದ ನೆವದಲ್ಲಿ ದೈವಿಕಕಲ್ಪನೆಯ ಧಾರ್ಮಿಕ ಮಾರ್ಗದಲ್ಲಿ ಮಾನಸಿಕಹಿತ ಕಂಡುಕೊಳ್ಳುವ ಬಯಕೆಯೇ ?

ಅಲ್ಲವಾಗಿದ್ದಲ್ಲಿ .

ಬಾಲ್ಯಕಳೆದು ಯೌವನಕ್ಕೆ ಕಾಲಿರಿಸಿ ಜೀವನಕ್ಕೊಂದು ದಾರಿಹುಡುಕುವ ನೆವದಲ್ಲಿ ಮನೆಬಿಟ್ಟು ದೂರದೂರ ಸೇರಿಕೊಂಡಿರುವ ಅಣ್ಣ, ತಂಗಿ, ಅಕ್ಕ ತಮ್ಮ, ಇಷ್ಟಬಂಧು ಮಿತ್ರರುಗಳನ್ನೆಲ್ಲಾ ಒಟ್ಟುಗೂಡಿಸುವ, ಉಭಯ ಕುಶಲೋಪರಿ ವಿಚಾರಿಸಿಕೊಳ್ಳಲು ಅವಕಾಶ ಒದಗಿಸುವ ಮುಂದಾಲೋಚನೆಯ ಪೂರ್ವಿಕರ ಸಹಚಿಂತನೆಯ ಪಕ್ವ ಫಲವೇ?

ಲೋಕೋ ಭಿನ್ನ ರುಚಿಃ

ಒಬ್ಬೊಬ್ಬರಿಗೊಂದೊಂದು ವಿಧದಲ್ಲಿ ಸುಖ ಶಾಂತಿ ನೆಮ್ಮದಿಗಳನ್ನು ನೀಡಬಲ್ಲ ಹಬ್ಬಗಳಲ್ಲಿ ದೀಪಾವಳಿಗೆ ಹೆಚ್ಚಿನ ಸ್ಥಾನಮಾನ ಕಲ್ಪಿಸಬಹುದೇನೋ.

ಮನೆಯಂಗಳದಲ್ಲಿ ರಾಶಿಯಾಗಿ ಬಿದ್ದಿರಬಹುದಾದ ಕಣಜಗಳ ರಾಶಿ;

ಸಮೃದ್ಧ ಫಸಲಿನಿಂದ ಸುಶೋಭಿತ ಸ್ತ್ರೀಯಂತೆ ರಾಜಿಸುವ ನಮ್ಮ ಕೃಷಿಭೂಮಿ;

ರಸಿಕತೆಯ ಮಾನವ ಮನಸ್ಸಿಗೆ ಮುದ ತಾರದಿದ್ದೀತೆ ? ಮಾನವ ಮನಸ್ಸು ಕೊಯ್ಲಿಗೆ ಬೆಳೆದು ನಿಂತ ಭತ್ತದ ಬೆಳೆಯನ್ನು ಕಂಡು ಆನಂದೋಲ್ಲಾಸದಲ್ಲಿರುವಾಗಲೇ ಬಂದುಬಿಡುತ್ತದೆ ದೀಪಾವಳಿ–

ದೀಪಾವಳಿ ಹಬ್ಬಗಳ ರಾಜ.

**ಶ್ರೀ ಪುತ್ತೂರು ವ್ಯಾಸಕೃಷ್ಣ ತಂತ್ರಿ**

ಹಳ್ಳಿ ದಿಲ್ಲಿಯ ಜನತೆ, ನಾಡು ಗುಡ್ಡಗಳ ಜನಾಂಗ ಆಚರಿಸುವ ರಾಷ್ಟ್ರೀಯ ಹಬ್ಬ–

ವೇದಕಾಲದ ಪ್ರಾಚೀನತೆಯೊಂದಿಗೆ ಪುರಾಣ ಪುಷ್ಟಿ ದೊರಕಿಸಿಕೊಂಡಿರುವ ಇದಕ್ಕೆ ಸಾಹಿತ್ಯದಲ್ಲಿ ಬಗೆಬಗೆಯ ಬಣ್ಣನೆಗಳಿವೆ–

ಹೆಚ್ಚುಕಡಿಮೆ ೪–೫ ದಿನಗಳ ಪರ್ಯಂತ ವೈವಿಧ್ಯತೆಯಿಂದಾಚರಿಸಲ್ಪಡುವ ಈ ದೀಪಾವಳಿಗೆ ಕೌಮುದೀಮಹೋತ್ಸವ ಎಂಬ ಹೆಸರೂ ಬಳಕೆಯಲ್ಲಿದೆ–

“ಬೊಳ್ಪುದೊಪರ್ಬ” ಎಂದು ತುಳುವಂದಿಯಿಂದ ಕರೆಯಿಸಿಕೊಳ್ಳಲ್ಪಟ್ಟಿರುವ ಈ ಹಬ್ಬ ಹೆಸರಿಗೆ ತಕ್ಕಂತೆಯೇ ಬೆಳಕು ಹೊತ್ತಿಸಿ ಬೆಳಕು ಹರಿಸಿ, ಬೆಳಕನ್ನೇ ತುಂಬಬಲ್ಲ ಬೆಳಕಿನ ಹಬ್ಬ.

ಅಜ್ಞಾನದ ಅಂಧಕಾರವನ್ನು ಹೋಗಲಾಡಿಸಿ ಸುಜ್ಞಾನದ ತಂಬೆಳಕನ್ನು ಚೆಲ್ಲಲೆಂದೇ ಮರಳಿ ಮರಳಿ ಬರುವ ಹಬ್ಬ

ಮಿತಿಮೀರಿ ಖರ್ಚುಮಾಡುವ ಮುನ್ನ ಮುಂದಿನದನ್ನು ಯೋಚಿಸಿ ನೋಡು. ದುಂದುವೆಚ್ಚ ದಿವಾಳಿಗೆ ನಾಂದಿಯಾದರೆ, ಮಿತವ್ಯಯ ಉಂಬಳಿಗೆ ಎಡೆಮಾಡಿಕೊಡುತ್ತದೆ ಎಂಬುದನ್ನೂ ಇದು ಸಾರುತ್ತದೆ

ಧನತ್ರಯೋದಶಿ–ಹಂಡೆಪೂಜೆ–ಯಮದೀಪ:–

ಅಶ್ವೀಜಮಾಸದ ಕೃಷ್ಣತ್ರಯೋದಶಿ – ಧನತ್ರಯೋದಶಿ–

ಧರ್ಮದೇವತೆ ಯಮ ಯಮಧರ್ಮರಾಯನ ಒಲವು ಸಂಪಾದಿಸಲೆಂದು ಹಾಗೂ ತನ್ಮೂಲಕ ಪಿತೃದೇವತೆಗಳೆಲ್ಲರ ಸಂತೃಪ್ತಿಗಾಗಿ ಅಂದು ಮನೆ ಮುಂದೆ ಆಕಾಶಕ್ಕೆ ತೋರುವಂತೆ ಎಳ್ಳೆಣ್ಣೆಯ ದೀಪವನ್ನಿಡುತ್ತಾರೆ. ನಾನು ನಾನೆಂಬ ಮನದೊಳಗಿನ ಅಹಂಕಾರದ ಕತ್ತಲನ್ನು ಕರಗಿಸಿ ನನ್ನೊಳಗಿನ ಜ್ಯೋತಿಸ್ವರೂಪವನ್ನು ಕಾಣುವ ಜ್ಞಾನ ಬೆಳಗಲೆಂದು ಪ್ರತಿಯೊಬ್ಬ ಸಾತ್ವಿಕ ಮಾನವನೂ ಕೈಮುಗಿದು ವಿಶಾಲ ನಕ್ಷತ್ರ ಪುಂಜವನ್ನು ದಿಟ್ಟಿಸುತ್ತಾನೆ, ಕೈ ಮುಗಿಯುತ್ತಾನೆ–

ರಾತ್ರಿ ಚಂದ್ರೋದಯದ ಅಭ್ಯಂಜನ ಸ್ನಾನಕ್ಕೆಂದು ಹಂಡೆಗೆ ನೀರು ತುಂಬಿಸುವ ಕಾರ್ಯಾಂಗ ಹಂಡೆ ಪೂಜ ನಡೆಸುತ್ತಾನೆ.

**ನರಕ ಚತುರ್ದಶಿ :**

ನರಕ ಭೂಮಿಪುತ್ರ. ಬ್ರಹ್ಮಬಲದಿಂದ ತಾನೇ ತಾನಾಗಿ ದುರಹಂಕಾರಿಯಾಗಿ ಭೂಭಾರವಾಗಿ ಮೆರೆಯುತ್ತಿದ್ದ ಅತನನ್ನು ಶ್ರೀಕೃಷ್ಣ ಕೊಂದು ವಿಜಯ ಸಾಧಿಸಿದ ದಿನ–

ಈ ಚತುರ್ದಶೀ ತಿಥಿಯ ಅಭ್ಯಂಜನಸ್ನಾನ ಅವನ ಸಂತೃಪ್ತಿಗಾಗಿ. ಶ್ರೀಕೃಷ್ಣ ಪರಮಾತ್ಮ ಅಂತ್ಯಕಾಲದಲ್ಲಿ ಅವನಿಗಿತ್ತ ವರ ಅದು–ಅಂದಿನ ಅಭ್ಯಂಜನ ಸ್ನಾನ ಮಾನವನಿಗೆ ಶ್ರೇಯಸ್ಕರ ಹಾಗೂ ಸಂಪತ್ಕರ. ಎಣ್ಣೆಯಲ್ಲಿ ಲಕ್ಷ್ಮಿಯೂ ನೀರಿನಲ್ಲಿ ಗಂಗೆಯೂ ಅಂದು ಸನ್ನಿಹಿತರಾಗಿರುತ್ತಾರೆಂಬುದು ಅಚಲನಂಬಿಕೆ–

**ಅಮಾವಾಸ್ಯೆ – ಬಲೀಂದ್ರ ಪೂಜೆ – ಧನಧಾನ್ಯ ಲಕ್ಷ್ಮೀ ಆರಾಧನೆ:–**

ಸುತ್ತ ಮುತ್ತೆಲ್ಲಾ ಅಮಾವಾಸ್ಯೆಯ ಕತ್ತಲೂ ಕವಿದಿದ್ದರೂ ಮಾನವನ ಮನೋವಂದಿರಗಳಲ್ಲಿ ತುಂಬಿ ತುಳುಕುತ್ತಿರುತ್ತದೆ, ಅಂದು ದೀಪಾವಳಿಯ ಬೆಳಕಿನ ಆನಂದ ಮನೆಮನಗಳಲ್ಲಿ ಧಾರ್ಮಿಕ ವರ್ಚಸ್ಸು. ಸಾತ್ತ್ವಿಕ ತೇಜಸ್ಸು–

ಹೆಣ್ಣು ಗಂಡುಗಳೊಂದಾಗಿ ಸಂಭ್ರಮೋಲ್ಲಾಸದಿಂದ ದೇವದೇವಾಲಯಗಳಿಗೆ ಭೇಟಿಕೊಡುವ ಈ ದಿನ ಗುರು ಹಿರಿಯರಿಗೆ ಕಿರಿಯರುಗಳೆಲ್ಲರ ನಮನ ಕಾರ್ಯಗಳು ನಡೆಯುತ್ತವೆ. ದೂರದೂರಿನ ಆತ್ಮೀಯರುಗಳಿಗೆಲ್ಲಾ ಶುಭಸಂದೇಶಗಳ ರವಾನೆಯಾದರೆ ಅಂಗಡಿಪತ್ರಗಳ ವರುಷದ ಲೆಖ್ಖಾಚಾರ ಮುಗಿದಿರುತ್ತದೆ. ನೂತನ ಬಟ್ಟೆಗಳ ದಾನಧಾರಣ ಕಾರ್ಯಕ್ರಮಗಳೊಂದಿಗೆ ಅಲಂಕೃತರಾಗಿ ತಂತಮ್ಮ ಅಂಗಡಿಗಳಲ್ಲಿ ಅಳತೆಕಲ್ಲುಗಳನ್ನೆಲ್ಲಾ ಜೋಡಿಸಿ, ಸಾರಿಸಿ ಸಿಂಗರಿಸಿ ಲಕ್ಷ್ಮೀ ಪ್ರಾಪ್ತಿಗಾಗಿ ಧನಧಾನ್ಯ ಲಕ್ಷ್ಮೀಪೂಜೆಗಳನ್ನು ವ್ಯಾಪಾರಿ ವೃಂದ ನಡೆಸುತ್ತಾರೆ

ಕೇವಲ ತನ್ನ ಮೂರಳತೆಯ ಪಾದದಿಂದ ಭೂವ್ಯಾಕಾಶವನ್ನೆಲ್ಲಾ ಅಳೆದು ಉಳಿದೊಂದು ಪಾದವನ್ನು ಬಲಿಚಕ್ರವರ್ತಿಯ ತಲೆಯಮೇಲೆಯೇ ಇಟ್ಟು ಅತನನ್ನು ಪಾತಾಳಕಟ್ಟಿದ ತ್ರಿವಿಕ್ರಮ ವಿಷ್ಣು ತನ್ನ ಭಕ್ತನಾದ ದೈತ್ಯಕುಲಶ್ರೇಷ್ಠ ಬಲಿ ಚಕ್ರವರ್ತಿಗೆ ಇತ್ತ ಮಾತಿನಂತೆಯೇ ನಡೆದು ಬರುತ್ತಿದೆ, ಇಂದಿಗೂ ಭೂಮಂಡಲದಲ್ಲಿ ಬಲೀಂದ್ರ ಪೂಜೆ.

ಭಗವಂತ ವಿಷ್ಣುವನ್ನೇ ತನ್ನ ಮಹಾದಾನದ ಪ್ರಭಾವದಿಂದ ತನ್ನ ಮನೆಯ ಬಾಗಿಲುಕಾಯುವ ಸೇವಕನನ್ನಾಗಿ ಮಾಡಿಕೊಂಡ ಭಕ್ತಶಿಖಾಮಣಿ ಬಲಿಯ ಸಂತೃಪ್ತಿಗಾಗಿ ಅಮಾವಾಸ್ಯೆಯ ಪರ್ವ ದಿನದಂದು ಜಾತಿಮತಗಳಂತರವಿಲ್ಲದೆ ತುಳಸಿ ಕಟ್ಟೆಯ ಮುಂದೆ ಸ್ವಸ್ತಿಕ ಬರೆದು, ಬಲಿಕಂಬನೆಟ್ಟು, ಸಾಲಿಗ್ರಾಮದಲ್ಲಿ ಬಲೀಂದ್ರಾಂತರ್ಗತ ವಾಮನನನ್ನು ಅನನ್ಯಭಕ್ತಿ ಭಾವದಲ್ಲಿ ಪೂಜಿಸಿ, ಪರಿವಾರ ಸಮೇತ ಬಲೀಂದ್ರನಿಗೆ ಮಂಗಳಾರತಿ ಬೆಳಗಿಸಿ ದೀಪಾರಾಧನೆ ನಡೆಸುತ್ತಾರೆ ಕೃಷ್ಣಾರ್ಪಣವಿಟ್ಟು.

ಬಲಿರಾಜ ನಮಸ್ತೇಸ್ತು
ವಿರೋಚನಸುತ ಪ್ರಭೋ ।
ಭವಿಷ್ಯೇಂದ್ರ ಸುರಾರಾತೇ
ದೀಪೋಯಂ ಪ್ರತಿಗೃಹ್ಯತಾಂ ॥

ಎಂದು ತಮ್ಮ ಮನೆಯ ಎಲ್ಲಾ ಭಾಗಗಳಿಗೂ ದೀಪ ತೋರಿಸುತ್ತಾರೆ–

ಕತ್ತಲಾಗಿ ಕಾಣುವ ಅಮಾವಾಸ್ಯೆ ಮಾಯವಾದೊಡನೆಯೇ ಬರುತ್ತದೆ ಬೆಳಕಿನ ಬಲಿಪಾಡ್ಯ–ಬಲಿ ಪ್ರತಿಪತ್–

**ಗೋಪೂಜೆ :–**

ಭಾರತೀಯನ ದೃಷ್ಟಿಯಲ್ಲಿ ಹಸು–ಗೋಮಾತೆ ಸುರಭಿ – ಪುಣ್ಯಕೋಟಿ ಎಂದು ಕರೆಯಿಸಿಕೊಳ್ಳುವ ಈ ಹಸುವಿನ ದೇಹದಲ್ಲಿ ಕೋಟಿಕೋಟಿ ದೇವತೆಗಳು ನೆಲೆಸಿಕೊಂಡಿದ್ದಾರೆಂದು ಅಸ್ತಿಕರ ನಂಬಿಕೆ

ಗೋಪಾಲಬಾಲ ಶ್ರೀಕೃಷ್ಣ ಗೋವರ್ಧನಗಿರಿ ಧಾರಿಯಾಗಿ ಮಹಾವೃಷ್ಟಿಯಿಂದ ಗೋಪಾಲ ಗೋವುಗಳನ್ನು ಸಂರಕ್ಷಿಸಿದ ದಿನವೆಂತಲೂ ಹೇಳುತ್ತಾರೆ

ಆತ್ಮೀಯ ಅಂದು ಗೋವುಗಳನ್ನು ಮಿಯಾಯಿಸಿ, ಅಲಂಕರಿಸಿ ಸುಗ್ರಾಸ ಗೋಗ್ರಾಸಗಳನ್ನಿತ್ತು ಅವುಗಳೊಂದಿಗೆ ಆನಂದೋಲ್ಲಾಸದಲ್ಲಿ ಮೈಮರೆಯುತ್ತಾರೆ–

**ಯಮದ್ವಿತೀಯಾ, ಬಂಧುದ್ವಿತೀಯಾ :–**

ದೀಪಾವಳಿಯ ಹಬ್ಬದ ನೆಪದಲ್ಲಿ ಇಂದು ಕೆಲವು ಕಡೆ ಅಣ್ಣತಮ್ಮಂದಿರು, ಅಕ್ಕತಂಗಿಯರಿಂದ ಆರತಿ ಮಾಡಿಸಿಕೊಂಡು ಅವರ ಮನೆಯಲ್ಲಿ ಆದರಾತಿಥ್ಯ ಸ್ವೀಕರಿಸಿ ಆಕೆಯ ಹೃನ್ಮನಗಳನ್ನು ಸಂತೋಷದ ಮಾತುಗಳಲ್ಲಿ ಉಡುಗೊರೆಕೊಟ್ಟು ಗೆಲ್ಲುತ್ತಾರೆ– ನರಕಾಧಿಪತ್ಯವನ್ನು ಸಂಪಾದಿಸಿಕೊಂಡ ದಿನ ಇದೆಂಬ ಹಿನ್ನೆಲೆಯಲ್ಲಿ ಯಮಧರ್ಮರಾಯನ ಪ್ರೀತಿ ಸಂಪಾದನೆಗಾಗಿ ಯಮ ತರ್ಪಣಾದಿಗಳನ್ನು ಬಿಟ್ಟು, ಅಕ್ಕತಂಗಿ, ಅಣ್ಣ ತಮ್ಮಂದಿರು ಪರಸ್ಪರ ಕ್ಷೇಮಸಮಾಚಾರಗಳ ವಿನಿಮಯ ಒಕ್ಕೂಟದಲ್ಲಿ ಒಂದಾಗಿ ಸಿಹಿಯೂಟದಲ್ಲಿ ಭಾಗವಹಿಸುತ್ತಾರೆ.

ಮಾನವನಾದವ ತಾನು ವರ್ಷವಿಡೀ ಅನುಭವಿಸಿದ ಕಷ್ಟನಷ್ಟಗಳ ಪರಿಣಾಮದಿಂದ, ಯಾಂತ್ರಿಕಜೀವನದಿಂದ ಬೇಸರ ತಾಳುವುದು ಸಹಜ. ಬೇಸರ ಹೆಚ್ಚಾದಂತೆ ಮಾನಸಿಕ ನೆಮ್ಮದಿ ಕಡಿಮೆಯಾಗುತ್ತದೆ.

ಹೀಗಿರುವಾಗ ಅವನ ಚಂಚಲ, ಬೇಸರ ಚಿತ್ತವನ್ನು ಮುದಗೊಳಿಸಿ ಒಂದೆರಡು ದಿನದಮಟ್ಟಿಗಾದರೂ ಸಂತಸ, ಉತ್ಸಾಹ, ಉಲ್ಲಾಸ, ಸರಸಸಲ್ಲಾಪದ ಮಾತುಕತೆಗಳಲ್ಲಿ ಪರಸ್ಪರ ಸಹಭಾಗಿಯಾಗಿ ಹೊಸಸ್ಫೂರ್ತಿ ಗಳಿಸಬೇಕಿದ್ದರೆ ಈ ದೀಪಾವಳಿಯಂತಹ ಉತ್ತಮ ಸಾಂಸ್ಕೃತಿಕ ಪರಂಪರೆಗಳನ್ನು ಒತ್ತಿಹೇಳುವ ಹಬ್ಬಗಳ ಆಚರಣೆ ಅತ್ಯವಶ್ಯ.

ಇದನ್ನರಿತೇ – ನಮ್ಮ ಪೂರ್ವಜರು ಈ ಹಬ್ಬದ ಆಚರಣೆಗಳನ್ನು-ಹೆಚ್ಚಿನಮಟ್ಟಿಗೆ ಯಾರೂ ಕಡೆಗಣಿಸದಂತೆ-ಒಂದಲ್ಲ ಒಂದು ರೀತಿಯಲ್ಲಿ ಶಾಸ್ತ್ರೀಯವಾಗಿಯೂ ತಾರ್ಕಿಕವಾಗಿಯೂ ಭದ್ರವಾಗಿ ನಮಗೆ ತಲುಪಿಸಿದ್ದಾರೆ.

✱



## ಯುವವಾಣಿ

# ಗುರು ಪರಂಪರೆ

ಗರ್ವ ಪಡದುಪಕಾರಿ, ದರ್ಪಬಿಟ್ಟಧಿಕಾರಿ
ನಿರ್ವಿಕಾರದ ನಯನದಿಂ ನೋಳ್ಪದಾರಿ
ಸರ್ವಧರ್ಮಾಧಾರಿ ನಿರ್ವಾಣ ಸಂಚಾರಿ
ಉರ್ವರೆಗೆ ಗುರುವವನು
-ಡಿ.ವಿ.ಜಿ ಅವರು ಎನ್ನುತ್ತಾರೆ

'ಗು' ಕಾರವೆಂಬ ಅಂಧಕಾರವನ್ನು 'ರು' ಕಾರ ಪ್ರಕಾಶದಿಂದ ನಿರ್ಮೂಲನಮಾಡುವುದೇ 'ಗುರು ಶಬ್ದದ ಅರ್ಥ. ಇನ್ನೂ ವಿಶದವಾಗಿ ದತ್ತ ಮಾಹಾತ್ಮ್ಯ ಎಂಬ ಗ್ರಂಥದಲ್ಲಿ

'ಗ' ಕಾರಃ ಸಿದ್ಧಿದಃ ಪ್ರೋಕ್ತೋ
ರೇಫಃ ಪಾಪಸ್ಯದಾ ಹಕಃ
ಉಕಾರೋ ವಿಷ್ಣುರವ್ಯಕ್ತ
ಸ್ತ್ರಿತಯಾತ್ಮಾ ಗುರುಃ ಪರಃ

'ಗುರು' ಶಬ್ದದೊಳಗಿನ 'ಗ' ಕಾರವೆಂದರೆ ಸಿದ್ಧಿಯನ್ನು ಕೊಡತಕ್ಕದ್ದು ರೇಫವು ಪಾಪವನ್ನು ದಹಿಸುವುದು. ಉ, ಕಾರವು ವಿಷುವಿನ ಅವ್ಯಕ್ತ ಸ್ವರೂಪವನ್ನೂ ಬೋಧಿಸುವುದು. ಹೀಗೆ ಶ್ರೀಗುರು ನಿಶ್ಚಿತವಾಗಿ ತ್ರಯಾತ್ಮಕವಾಗಿ ಶ್ರೇಷ್ಠನೂ ಸತ್ಯನೂ ಆಗಿರುವನು.

ಇಲ್ಲಿ ಶ್ರೀಸಾಧು ಪ್ರೇಮದಾಸಜೀ ತಿಳಿಸಿ ಕೊಟ್ಟಿರುವ ಉದಾಹರಣೆಯನ್ನು ಸ್ಮರಿಸುವುದು ಸೂಕ್ತವಾಗಿದೆ- ಧರ್ಮರಾಯ ಬಾಲ್ಯದಲ್ಲಿ ವಿದ್ಯಾಭ್ಯಾಸವನ್ನು ಮಾಡುತ್ತಿದ್ದಾಗ- ಹಿಮ್ಮೆ ಉಪಾಧ್ಯಾಯರು ಕೋಪಾವೇಶದಿಂದ ಬಾಲಕ ಧರ್ಮರಾಯನನ್ನು ಚೆನ್ನಾಗಿ ಥಳಿಸಿದರು. ಬಾಲಕ ಧರ್ಮರಾಯ ಕಂಬನಿ ಸುರಿಸದೆ ಇದ್ದದ್ದನ್ನು ಗಮನಿಸಿ "ಕಾರಣವೇನೆಂದು' ಕೇಳಿದರು. ಆಗ ಬಾಲಕನು 'ಸ್ವಾಮಿ ತಾವು ಕೊಟ್ಟ ಪಾಠದಲ್ಲಿ, ಎರಡುವಾಕ್ಯಗಳಿವೆ, ಮೊದಲನೆಯದು ಸತ್ಯವನ್ನುನುಡಿ ಎರಡನೆಯದು ತಾಳ್ಮೆಯಿಂದ ಬಾಳು. ಇದರಲ್ಲಿ ಮೊದಲನೆಯದನ್ನು ಪೂರ್ಣ ಅಭ್ಯಾಸಮಾಡಿರುತ್ತೇನೆ. ಎರಡನೆಯ ವಾಕ್ಯವನ್ನು ಪೂರ್ಣವಾಗಿ ಅಭ್ಯಾಸಮಾಡಿಲ್ಲ, ಏಕೆಂದರೆ ತಾವು ನನ್ನನ್ನು ಥಳಿಸಿದಾಗ ಮೊದಲು ತಾಳ್ಮೆಯಿಂದ ತಡೆದುಕೊಂಡೆ. ರಕ್ತಬಂದನಂತರ ತಾಳಲಾರದೆ ಹೋದೆ'ಎಂಬುದಾಗಿ ಕಾರಣವನ್ನುಹೇಳಲಾಗಿ ಉಪಾಧ್ಯಾಯರು ಬಾಲಕನ ಜ್ಞಾನವಿಕಾಸಕ್ಕೆ ಚಕಿತರಾಗಿ ಮೆಚ್ಚಿ, ತಮಗೆ ಇನ್ನೂ ಮೊದಲನೆಯ ವಾಕ್ಯದಬೋಧೆಯಾಗಲಿಲ್ಲವೆಂದು ಚಿಂತಿಸಿ ಬಾಲಕನಾಗಿದ್ದ ಧರ್ಮರಾಯನನ್ನು ಮುದ್ದಿಸಿ "ಅಪ್ಪಾ! ನೀನು ನಿನಗೆ ಗುರುವಾಗುವುದಕ್ಕೆ ಅರ್ಹನು" ಎಂದರು.

ಗುರುಗಳಲ್ಲಿ ಮೂರುಬಗೆ. ಒಂದನೇ ವರ್ಗದವರು- ತಮ್ಮ ಬಳಿಗೆ ಬಂದವರನ್ನು ದೂರುವರೇ ಹೊರತು, ತಿದ್ದುವುದಿಲ್ಲ- ಎರಡನೆಯವರು, 'ಹಾಗೆ ಇರಬೇಕು ಹೀಗೆ ಇರಬೇಕು' ಎನ್ನುವರೇ ಹೊರತು ಮಾರ್ಗದರ್ಶನೆ ಸೊನ್ನೆ, ಮೂರನೆಯವರು ಮಾರ್ಗದರ್ಶನ ನೀಡುವುದಲ್ಲದೆ ಪ್ರತಿಭೆಯನ್ನು ಗುರುತಿಸಿ ಪ್ರೋತ್ಸಾಹ ನೀಡುತ್ತಾರೆ-ಇವರೇ ಸದ್ಗುರುಗಳು.

ಗುರುಗಳಲ್ಲಿ ವಿಧವಿಧವಾದ ವರ್ಗಗಳಿವೆ ಎಂಬುದಾಗಿ ಸುಭಾಷಿತವೊಂದುತಿಳಿಸುತ್ತದೆ.

ಗುರವೋ ಬಹವಸ್ಸಂತಿ
ಶಿಷ್ಯವಿತ್ತಾಪಹಾರಕಾಃ
ದುರ್ಲಭೋಹಿ ಗುರುರ್ಲೋಕೇ
ಶಿಷ್ಯಹೃತ್ತಾಪ ಹಾರಕಃ

ತಾತ್ಪರ್ಯ-ಶಿಷ್ಯರ ಹಣವನ್ನು ಅಪಹಾರ ಮಾಡುವವರು, ಬಹಳ ಮಂದಿ ಇದ್ದಾರೆ, ಆದರೆ ಶಿಷ್ಯರ ಹೃದಯದ ತಾಪವನ್ನು ಪರಿಹರಿಸುವರು ದೊರಕುವುದು ದುರ್ಲಭ, ಕಾಳಿದಾಸ ಕವಿಯು ತನ್ನಹೊಟ್ಟೆಯ ಪಾಡಿಗಾಗಿ ಮಾತ್ರ ವಿದ್ಯೆ ಕಲಿಸುವವರು ಗುರುವಲ್ಲ ವ್ಯಾಪಾರಿ ಎನ್ನುತ್ತಾನೆ

ಗುರುಮಹಿಮೆ ತಿಳಿಸಲು ಅಸದಳ, ಗುರುವಿಗಿಂತ ಅಧಿಕ ತತ್ತ್ವವಿಲ್ಲ ಗುರುಃ ಗಿಂತಲೂ ಅಧಿಕವಾದ ತಪಸ್ಸಿಲ್ಲ. ಗುರುವಿಗಿಂತಲೂ ಶ್ರೇಷ್ಠವಾದುದು ಯಾವುದೂ ಇಲ್ಲ- ಗುರುಮಹಿಮೆ ತಿಳಿಸುವ ಸ್ತುತಿಯೊಂದರಲ್ಲಿ-

ಗುರುಃ ಪಿತಾ ಗುರುರ್ಮಾತಾ
ಗುರುರ್ದೇವಃ ಪರಃ ಶಿವಃ
ಶಿವೇ ರುಷ್ಟೆ ಗುರುಸ್ತ್ರಾತಾ
ಗುರೌ ರುಷ್ಟೇ ನ ಕಶ್ಚನ||

ಗುರುವು ತಂದೆ ತಾಯಿ, ಪರಶಿವನು ಹೌದು ಶಿವನು ಸಿಟ್ಟಾದರೆ ಗುರುವು ರಕ್ಷಿಸುವನು ಆದರೆ ಗುರುವು ಸಿಟ್ಟಾದರೆ ರಕ್ಷಿಸಲು ಯಾವ ದೈವವೂ ಸಮರ್ಥನಿಲ್ಲ.

ಸ್ವಾಮಿ ಶಾರದಾನಂದರು ಶ್ರೀರಾಮಕೃಷ್ಣ ಪರಮಹಂಸರ ಬಗ್ಗೆ ಸ್ತುತಿಸುವಾಗ

ಸರ್ವಧರ್ಮ ಸ್ಥಾಪಕಸ್ತ್ವಂ
ಸರ್ವ ಧರ್ಮ ಸ್ವರೂಪಕಃ
ಆಚಾರ್ಯಾಣಾಂ ಮಹಾಚಾರ್ಯೋ
ರಾಮಕೃಷ್ಣಯತೇ ನಮಃ

ಎಂಬುದಾಗಿ ಗುರುಮಹಿಮೆಯನ್ನು ಅದ್ಭುತವಾಗಿ ತಿಳಿಸಿದ್ದಾರೆ.

ಶ್ರೀಮನ್ನಿಗಮಾಂತದೇಶಿಕರು 'ಅಭೀತಿಸ್ತವಃ'ದಲ್ಲಿ

ಪ್ರಬುದ್ಧಗುರುವೀಕ್ಷಣ
ಪ್ರಥಿತವೇಂಕಟೇಶೋದ್ಭವಾಂ|
ಇಮಾ ಮಭಯ ಸಿದ್ಧಯೇ
ಪಠತ ರಂಗಭರ್ತುಃ ಸ್ತುತಿಮ್||

ಪ್ರಬುದ್ಧ ಜ್ಞಾನವುಳ್ಳ ಆತ್ರೇಯ ರಾಮಾನುಜರೇ ಮೊದಲಾದ ಗುರುಗ

**ಮತ್ತಿಕೆರೆ ಅನಂತು**

ವಿಶೇಷ ಕಟಾಕ್ಷದಿಂದ 'ಅಭೀತಿಸ್ತವ' ಉದ್ಧ ವಿಸಿತು. ಇದನ್ನೂ ಪಠಿಸಿದ ಮಾತ್ರಕ್ಕೆ ಭವಬಂಧನದ ಭಯಪರಿಹಾರವಾಗಿ ಮುಕ್ತಿ ದೊರಕುವುದೆಂದು ಉಲ್ಲೇಖಿಸಿದ್ದಾರೆ. ಗುರು ಕೃಪೆ ಇಲ್ಲದ ಬಾಳು ವ್ಯರ್ಥ. ವೇದ ಶಾಸ್ತ್ರಗಳ ಸಾರವನ್ನರಿತವರು, ಭಗವಂತನ ಸಾಕ್ಷಾತ್ಕಾರಮಾಡಿಕೊಂಡವರ ಗುಲಾಮ ನಾಗದ ಹೊರತು ಮುಕ್ತಿ ದೊರೆಯುವುದು ಅಸಂಭವ ಎಂಬುದಾಗಿ ಅಭಿಪ್ರಾಯ ಪಡು ತ್ತಾರೆ. ನಾನು ನನ್ನದೆಂಬ ಅಹಂಕಾರವನ್ನು ಸಂಪೂರ್ಣ ಬಿಟ್ಟು ತ್ರಿಕರಣ (ಕಾಯೇನ, ವಾಚಾ, ಮನಸಾ) ಪೂರ್ವಕ ಗುರುವೇ ತನ್ನನ್ನು ಉದ್ಧರಿಸುವನೆಂಬ ದೃಢನಂಬುಗೆ ಯಿಂದ ಶರಣಾದವನು ಮಾತ್ರ ಗುರುವಿನ ಗುಲಾಮನಾದಾನು.

ನಾವು ಅನೇಕ ಶಾಸ್ತ್ರಗಳು ಗ್ರಂಥ ಗಳನ್ನು ಅಧ್ಯಯನ ಮಾಡಿದರೂ ಅದಕ್ಕೆ ಗುರುಕೃಪಾಮುದ್ರೆ ಬೀಳದಿದ್ದರೆ ಬೆಲೆ ಬರ ಲಾರದು. ಭಕ್ತಿಯಿಂದ ಮುಕ್ತಿ, ನಿಜವಾದ ಭಕ್ತಿ ಗುರು ಕೃಪೆಯಿಂದ ಬರುತ್ತದೆ ತಾವು ವ್ಯಾಸರಾಯ ಗುರುಗಳಸೇವೆ ಮಾಡಿ ಕೃತಾ ರ್ಥರಾದೆವೆಂದು ಪುರಂದರದಾಸರು ನಮಗೆ ಅಪ್ಪಣೆ ಕೊಡಿಸಿದ್ದಾರೆ.

ಸ್ವಾಮಿ ವಿವೇಕಾನಂದರು ಗುರುಗಳಬಗ್ಗೆ ತಿಳಿಸುತ್ತಾ 'ಆತ್ಮ ಜಾಗೃತವಾದ ಮತ್ತೊಂದು ಆತ್ಮದಿಂದ ಮಾತ್ರ ಬೆಳಕನ್ನು ಪಡೆಯ ಬಲ್ಲದು...ನಮ್ಮಲ್ಲಿ ಅನೇಕರು ಅಧ್ಯಾತ್ಮಿಕ ವಿಷಯಗಳಮೇಲೆ ಅದ್ಭುತ ವಾಗಿ ಮಾತನಾಡಬಲ್ಲವರಾದರೂ ಪರಿ ಣಾಮ ಸೊನ್ನೆ. ಯಾರಿಂದ ಅಧ್ಯಾತ್ಮಿಕ ಜೀವನ ಜಾಗೃತವಾಗಿ ಪ್ರೇರೇಪಣೆ ಪಡೆಯು ದೋ ಅವರೇ ಗುರುಗಳು. ಬ್ರಹ್ಮಜ್ಞಾನಿ ಗಳು ಮಾತ್ರ ಜಗದ್ಗುರುಗಳು' ಎಂದಿದ್ದಾರೆ.

ಭಕ್ತಮೀರಾ ತನ್ನೊಂದು ಕೀರ್ತನೆಯಲ್ಲಿ

ಮಾನಸ ಭಜರೆ ಗುರು ಚರಣಂ
ದುಸ್ತರ ಭವ ಸಾಗರ ತರಣಂ

ಎಂಬುದಾಗಿ ತಿಳಿಸಿದ್ದಾಳೆ. ಎಂತಹ ಮಹಿ ಮಾನ್ವಿತವಾಣಿ. ಶ್ರೀಶಂಕರರು –ಭಜಗೋ ವಿಂದ ಸ್ತೋತ್ರದಲ್ಲಿ–

ಗುರುಚರಣಾಮ್ಬುಜ ನಿರ್ಭರಭಕ್ತಃ
ಸಂಸಾರಾದಚಿರಾದ್ಭವ ಮುಕ್ತಃ

'ಗುರುವನ್ನು ನಂಬು ಸಂಪೂರ್ಣವಾಗಿನಂಬು, ಹಾಗೆ ನಂಬಿದರೆ ಹುಟ್ಟುಸಾವುಗಳ ಚಿಂತೆ ಯಿಂದ ಮುಕ್ತನಾಗುವೆ' ಎಂದಿದ್ದಾರೆ.

ಈಗಿನ ಕಾಲದಲ್ಲಿ ಗುರುವಿನ ಸಮ್ಮು ಖದಲ್ಲಿ ಉಪದೇಶ ಪಡೆಯುವುದು ಎಲ್ಲರಿಗೂ ಸಾಧ್ಯವಿಲ್ಲ ಒಂದುಗ್ರಂಥ ಅಥವ ವಿಗ್ರಹಮೂರ್ತಿ ಅಥವ ಯಾವುದಾದ ರೊಂದು ಸಂಕೇತವು ನಿಜವಾದ ಜ್ಞಾನ ವನ್ನು ಮೂಡಿಸಲುಬಹುದು. ಈ ದೃಷ್ಟಿ ಯಿಂದ ಶ್ರೀಶಂಕರರು "ದ್ರಕ್ಷ್ಯಸಿ ನಿಜ ಹೃದಯಸ್ಥಂ ದೇವಮ್" ಎಂಬುದಾಗಿ ಉದ್ಧರಿಸಿದ್ದಾರೆ.

ಅಧ್ಯಾತ್ಮಿಕತೆಯನ್ನು ಬಯಸಿ, ಜ್ಞಾನ ವನ್ನು ಆಶಿಸಿ ಅನೇಕರು ಗುರುಗಳ ಬಳಿಗೆ ಬರುತ್ತಾರೆ. ಗುರುಗಳು ಅವರಿಗೆ ತಿಳಿವ ಳಿಕೆ ನೀಡಿ, ಮಾರ್ಗದರ್ಶನ ಮಾಡಿ, ಸತ್ಯದ ಅರಿವುಂಟಾಗುವಂತೆ ಮಾಡುತ್ತಾರೆ. ಜ್ಞಾನಾ ರ್ಥಿಗಳು ತಮ್ಮ ಜ್ಞಾನಜ್ಯೋತಿಯನ್ನು ಸದಾ ಬೆಳಗಿಸಿಕೊಂಡಿರಬೇಕು. ಈ ರೀತಿ ಬೆಳಕನ್ನು ಹೆಚ್ಚಿಸಿಕೊಳ್ಳುವುದೇ ಸಾಧನೆ. ಈ ಸಾಧನೆ ನಿರಂತರವಾಗಿದ್ದರೆ ಮಾತ್ರ ಫಲ. ಸಾಧನೆಯಲ್ಲಿ ಲೋಪವಾದರೆ ಬೆಳಕು ಆರಿ ಹೋಗುವುದು. ಪುನಃ ಶ್ರವಣ ಮನನ ನಿಧಿ ಧ್ಯಾಸನಗಳಿಂದ ಮುಂದೆ ಹೋಗಬೇಕು

ಗುರುಗಳಿಗಿಂತ ಆಪ್ತರು ಇನ್ನಾರು ಇಲ್ಲ. ಅವರೇ ಸರ್ವದುರಿತಗಳನ್ನು ಕಳೆದು ಸುಖ ಸಂತೋಷ ನೀಡುವ ಕಾಮಧೇನು ಇಲ್ಲಿ ವರದಗೋಪಾಲವಿಠಲರ ಉಗಾಭೋಗ ವೊಂದನ್ನು ಉಲ್ಲೇಖಿಸ ಬಹುದು.

ಸ್ಮರಿಸು ಗುರುಗಳ ಮನವೆ
..... .. ..... .. .. .. . ... ..
ಪೊರೆದು ಮಂಗಳವೀವ
... . ...... . ..... ...... ...
ಗುರುಗಳ ಸ್ಮರಣೆಯಿಂದ
ಸಕಲ ಸಂಪದವು ನಿನಗೆ
ಗುರುಗಳ ಸ್ಮರಣೆಯಿಂದ
ವಿಶೇಷಧನ ದೊರಕುವುದು
ಗುರುಗಳ ಸ್ಮರಣೆಯಿಂದ
ಹರಿಯೊಲಿದು ಪೊರೆವಾ
ಗುರುಗಳಿಂದಧಿಕ
ನಿನಗೆ ಇನ್ನಾರು ಆಪ್ತರು

ಗುರುಗಳೇ ಪರಮ ಹಿತಕರರು ನೋಡು
ಗುರುಸ್ವಾಮಿ ವರದ ಗೋಪಾಲ ವಿಠ್ಠಲ
ಸರ್ವದುರಿತಗಳ ಕಳೆವನು
ಸುಖಗರೆವ ನೋಡು!

ಆಷಾಢ ಶುದ್ಧ ಪೂರ್ಣಿಮಾ ಗುರು ಅಥವ ವ್ಯಾಸಪೂರ್ಣಿಮಾ ಎಂದು ಪ್ರಸಿದ್ಧ ವಾಗಿದೆ. ಶ್ರೀಕೃಷ್ಣ ಜಗದ್ಗುರುವಾದರೆ ವ್ಯಾಸರು ಲೋಕಗುರುಗಳು.

ಶ್ರೀವ್ಯಾಸವಾಣಿಯು ಎರಡು ಮಾತು ಹೇಗಿವೆ –

ಪರೋಪಕಾರಃ ಪುಣ್ಯಾಯ
ಪಾಪಾಯ ಪರ ಪೀಡನಂ
* * * *
ಆತ್ಮನಃ ಪ್ರತಿಕೂಲಾನಿ
ನಪರೇಷಾಂ ಸಮಾಚರೇತ್
* * * *

ವಿಶ್ವಸಾರ ತಂತ್ರದಲ್ಲಿ ಗುರುಗಳಬಗ್ಗೆ–

ಬ್ರಹ್ಮಾನಂದಂ ಪರಮ ಸುಖದಂ
ಕೇವಲಂ ಜ್ಞಾನಮೂರ್ತಿಂ
ದ್ವಂದಾತೀತಂ ಗಗನ ಸದೃಶಂ
ತತ್ತ್ವಮಸ್ಯಾದಿ ಲಕ್ಷ್ಯಂ
ಏಕಂ ನಿತ್ಯಂ ವಿಮಲ ಮಚಲಂ
ಸರ್ವಧೀ ಸಾಕ್ಷೀ ಭೂತಂ
ಭಾವಾತೀತಂ ತ್ರಿಗುಣ ರಹಿತಂ
ಸದ್ಗುರುಂ ತಂ ನಮಾಮಿ

ಎಂಬುದಾಗಿ ಉದ್ಧೃತವಾಗಿದೆ.

ಸಾಮಾನ್ಯವಾಗಿ ಸರ್ವರಿಗೂ ಮೂರು ಗುರುಪರಂಪರೆಗಳು ಇರುತ್ತವೆ. ಒಂದು ತಾಯಿ ತಂದೆಯರು ಯಾವ ಸಂಪ್ರದಾಯ ದಲ್ಲಿ ಹುಟ್ಟಿ ಬೆಳೆದು ಬದುಕಿದರೋ ಅದು; ಮತ್ತೊಂದು–ಅವರವರ ರಾಷ್ಟ್ರದಲ್ಲಿ ಇರುವ ವಿವಿಧ ಧಾರ್ಮಿಕ ಮತಗಳ ಪರಂಪರೆ, ಮೂರನೆಯದು ನಾಡಿನ ಕವಿಗಳ ಪರಂಪರೆ. ಇಂಥಹ ಪರಂಪರೆಗಳಿಗೆ ವಂದಿಸೋಣ.

ಕವಿ'ರಾಘವ'ವರು ಗುರುಪರಂಪರೆ ಬಗ್ಗೆ

ಮೊದಲು ನಮಿಪೆನು
ನನ್ನ ತಾಯಿ ತಂದೆಗಳಿಗೆ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |


ಬ್ರಹ್ಮಜ್ಞಾನದುಪದೇಶ ನಿತ್ತ
ಪ್ರಥಮ ಗುರುಗಳಿಗೆ

... ..... ...............ಆಬಳಿಕ
ವಿವಿಧ ಶಾಲಾವ-ಹಾ ಪಾಠಶಾಲೆಗಳಲ್ಲಿ
ನಡೆಯಲಿ ನಿಷ್ಠೆಯನು,
ಕಾರ್ಯಪ್ರತಿಷ್ಠೆಯನು
ಬಾಳಿನ ಗುರಿಯ ಕಾಣಿಸಿ
ಕರ ಣಿಸಿದ ಗುರು ಪರಂಪರೆಗೆ
...... ... . . . .. ..... ..
ನೂರಾರು ಪಾರ ನೆಲೆ ಬೆಲೆ
ನೀತಿ ನಯಗಳನು
ಸನ್ನೆ ಸಾವಿರ ತೋರಿ, ಸತ್ಯ
ಸೌಂದರ್ಯಗಳ
ಗುರುವಿಗಾ ಪ್ರಕೃತಿ ದೇವಿಗೆ
ಜಗನ್ಮಾತೆಗಿದೂ ನಮಸ್ಕಾರ

ಎನ್ನುತ್ತಾರೆ.

ಧ್ಯಾನಶ್ಲೋಕವೊಂದು ಹೀಗೆ ತಿಳಿಸುತ್ತದೆ

ಲಕ್ಷ್ಮೀ ನಾಥ ಸಮಾರಂಭಾಂ
ನಾಥಯಾಮುನ ಮಧ್ಯಮಾಮ್
ಅಸ್ಮದಾಚಾರ್ಯ ಪರ್ಯಂತಾಂ
ವಂದೇ ಗುರು ಪರಂಪರಾಮ್

ಲಕ್ಷ್ಮೀನಾಥ ನಾರಾಯಣನನ್ನು ಪ್ರಾರಂಭ ಮಾಡಿಕೊಂಡು ನಾಥಮುನಿ ಯಾಮುನಾ ಚಾರ್ಯರನ್ನು ಮಧ್ಯದಲ್ಲಿ ಹೊಂದಿ ನನ್ನ ಈಗಿನ ಆಚಾರ್ಯರವರೆವಿಗೂ ಬಂದಿರುವ ಗುರುಪರಂಪರೆಗೆ ವಂದಿಸುತ್ತೇನೆ.

ಎಲ್ಲಕ್ಕೂ ಗುರುವೆ ಆದಿ, ಗುರುವೆ ಪರಮ ದೇವತೆ. ಗುರುವಿಗಿಂತ ಮೇಲಾದದ್ದು ಯಾವುದೂ ಇಲ್ಲ

ಗುರುಭ್ಯಸ್ತದ್ಗುರುಭ್ಯಶ್ಚ
ನಮೋ ವಾಕ್ಯ ಮಧೀಮಹೇ
ವೃಣೀಮಹೇ ಚ ತತ್ರಾದ್ಯಾ
ದಂಪತೀ ಜಗತಾಂ ಪತೀ

ನನ್ನ ಗುರುಗಳಿಗೆ, ಅವರ ಗುರುಗಳಿ ನಮಸ್ಕಾರಗಳನ್ನು ಹೇಳುತ್ತೇನೆ. ಆ ಗುರು ಪರಂಪರೆಯಲ್ಲಿ ಆದ್ಯರೂ ಜಗತ್ತಿಗೆ ಪ್ರಭು ಗಳೂ ಆದ ಲಕ್ಷ್ಮೀನಾರಾಯಣ ದಂಪತಿ ಗಳನು ನಾನು ವಂದಿಸುತ್ತೇನೆ.

# ಶ್ರೀ ವಿಜಯದಾಸರು

**ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯ**

**ಕಾರ್ತೀಕ ಶುದ್ಧ ದಶಮಿ.** ಶ್ರೀ ವಿಜಯದಾಸರ ಆರಾಧನಾದಿನ. ಅವರು ಪವಿತ್ರಕ್ಷೇತ್ರ ಭಾಸ್ಕರ ಕ್ಷೇತ್ರ ಎನಿಸುವ, ಗುಂತಕಲ್‌ಗೆ ಕೇವಲ ಐದು ಮೈಲಿ ದೂರದಲ್ಲಿರುವ ಶ್ರೀ ಚಿಪ್ಪಗಿರಿ. ಪರಮಾತ್ಮನಾದ ಶ್ರೀವೇಂಕಟೇಶ ನ್ಯೈಂತದಿಂದ ಶ್ರೀ ತಿರುಪತಿ ಕ್ಷೇತ್ರಕ್ಕೆ ಬರುವಂತೆ ಮಾಡಿದ ಜ್ಞಾನಿಶ್ರೇಷ್ಠರಾದ ಶ್ರೀ ಭೃಗುಋಷಿಗಳೇ ನಮ್ಮ ವಿಜಯದಾಸರು.

ವಿಜಯದಾಸರು ಚತುರ್ಯುಗ ಮೂರ್ತಿಗಳು. ನಾಲ್ಕುಯುಗಗಳಲ್ಲೂ ಅವತರಿಸಿ ಭಗವತ್ಕೈಂಕರ್ಯವಸಗಿದ ಪುಣ್ಯಪುರುಷರು. ಈ ವಿಚಾರವನ್ನು ಅವರ ತಮ್ಮಂದಿರೇ ಒಂದು ಸುಳಾದಿಯಲ್ಲಿ ತಿಳಿಸಿರುತ್ತಾರೆ.

ಅದಿಯಲಿ ಸುರವುನಿಯು
ಪಾದಸೇವೆಯ ಮಾಡಿ
ಮೋದದಲಿ ಸುರಲೀಲ ಎಂಬ
ಕಪಿಶ್ರೇಷ್ಠೆಯಲಿ
ಆ ದ್ವಾಪರದಿ ನಿಕಂಪನೆಂಬ ನಾಮದಲಿ
ಶ್ರೀಧರನ ಸೇವಿಸುತಲಿ
ಕಾದಿದ್ದು ಕಲಿಯುಗದಿ ಪುರಂದರ ದಾಸರ
ಸ್ವಾಮಿ ವಚನದ ಕೇಳಿ ತುರುಕರು ಆಗಿದ್ದು
ಪೇಳುವಿಲ್ಲದೆ ಜನಿಸಿ ಒರುಬರುತ ಮತ್ತೆ
ಮೇದಿನೀ ಸುರ ಜನ್ಮದಿ

ಕೃತಯುಗದಲ್ಲಿ ಭೃಗುಋಷಿಗಳಾಗಿಯೂ, ತ್ರೇತೆಯಲ್ಲಿ ಸುರಲೀಲಾ ಎಂಬ ಕಪಿಯಾಗಿಯೂ ದ್ವಾಪರದಲ್ಲಿ ನಿಕಂಪ ಎಂಬ ಯಾದವನಾಗಿಯೂ ಕಲಿಯುಗದಲ್ಲಿ ಪುರಂದರದಾಸರ ಮನೆಯಲ್ಲಿ ಶಿಸುಗರುವಾಗಿ, ಅವರ ಮಕ್ಕಳೆನಿಸಿದ ಮಧ್ವಪತಿ ವಿಠಲರಾಗಿ ನಂತರ ವಿಜಯರಾಯರಾದರು

ವಿಜಯದಾಸರ ದಿವ್ಯಚರಿತ್ರೆಯನ್ನು ಅವರ ತಮ್ಮಂದಿರಾದ ಹಯವದನ ವಿಠಲಾಂಕಿತದಾಸರು ಒಂಬತ್ತು ನುಡಿಗಳ "ನೆನೆಸಿದವರಘನಾಶನ ದಾಸರ ನೆನಸಿದವರಘನಾಶನಾ" ಎಂಬ ಕೃತಿಯಲ್ಲಿ ವಿಸ್ತರಿಸಿರುತ್ತಾರೆ. ಈವರೆಗೆ ಯಾವ ದಾಸರೂ ತಮ್ಮ ಆತ್ಮಕಥೆಯನ್ನು ತಾವೇ ಬರೆದುಕೊಂಡಿಲ್ಲ. ಆದರೆ ನಮ್ಮ ವಿಜಯದಾಸರು ತಮ್ಮ ಆತ್ಮಕಥೆಯನ್ನು ನಿರೂಪಿಸಿರುವುದು ಒಂದು ವೈಶಿಷ್ಟ್ಯ.

ವಿಜಯದಾಸರು ಮೂರಾವರ್ತಿ ಕಾಶಿ ಯಾತ್ರೆಯನ್ನು ಕಾಲುನಡಿಗೆಯಲ್ಲಿ ಮಾಡಿದರು. ಅವರ ಅದ್ವಿತೀಯ ದ್ವಿತೀಯಯಾತ್ರೆ ಸಮಯದಲ್ಲಿ ಶ್ರೀ ವೇದವ್ಯಾಸರಿಂದಲೇ, ಶ್ರೀ ವಿಜಯವಿಠಲ ಅಂಕಿತಪಡೆದ ವಿಚಾರವನ್ನು ಅವರ ತಮ್ಮಂದಿರು ಬಹು ಚಮತ್ಕಾರವಾಗಿ

"ಎಚ್ಚೆತ್ತು ನೋಡಿ ಸಿರಿ ಅಚ್ಯುತನ ಮಹಿಮೆಯನು ಬೆಚ್ಚಿ ಬೆದರದೆ ಎಮತ ಹೆಚ್ಚು ಸಂತೋಷದಲಿ ಕೊಚ್ಚಿ ಹೋದವು ಮನದ ಹೆಚ್ಚಿದ ಪಾಪಂಗಳು, ತಚ್ಚಿತ್ತದಲ್ಲಿ ಹರಿಯು ನಿಚ್ಚಮನ ಬಂದಂತೆ ಅಚ್ಚಸುಖ ತೀರ್ಥವಾತ ನೆಚ್ಚಿ ಕವನವ ಪೇಳಿ ನುಚ್ಚು ಮನವುಳ್ಳವರ ನಿಚ್ಚಟದಲಿ ತಿದ್ದಿ ಅಚ್ಚ ಜ್ಞಾನಭಕ್ತಿ ಮೆಚ್ಚುಗಾಣಿಕೆಯುತ್ತರು ಎಂದಿರುತ್ತಾರೆ

ವಿಜಯದಾಸರ ರಚಿಸಿದುವಸ್ತು, ಸುಳಾದಿಗಳನ್ನು ಪ್ರಾಯಶಃ ಮತ್ತ್ಯಾರೂ ರಚಿಸಿಗಲಾರರು. ಸಕಲಶಾಸ್ತ್ರ, ಉಪನಿಷತ್, ಪುರಾಣಾದಿಗಳಲ್ಲಿ ಉಕ್ತವಾದ ಆಯಾಯಾ ವಿಷಯಗಳಿಗೆ ಸಂಬಂಧಿಸಿದ ವಿಚಾರಾದಿಗಳನ್ನು ಸಂಪ್ರದಾಯ ಕ್ರಮದಿಂದ ಉತ್ತಮ ಶೈಲಿಯಲ್ಲಿ ನಿರೂಪಿಸುವ ವರಕವಿಗಳು ಹಾಗೂ ಜ್ಞಾನಿಶ್ರೇಷ್ಠರು ವಿಜಯದಾಸರು ಸಕಲ ತೀರ್ಥಕ್ಷೇತ್ರಗಳು, ನದ ನದಿಗಳು, ವ್ರತಾದಿಗಳು, ಎಲ್ಲಾ ಗುರುಗಳು, ಎಲ್ಲಾ ದೇವತೆಗಳು, ಮುಖ್ಯವಾಗಿ ಪರಮಾತ್ಮನಾದ ನಾರಾಯಣನ ಮಹಾಮಹಿಮೆ–ಇತ್ಯಾದಿಗಳನ್ನು ಸ್ಪಷ್ಟವಾಗಿ ನಿರೂಪಿಸುವ ಸಿಟ್ಟ ಪುರುಷರು ವಿಜಯದಾಸರು. ಇಷ್ಟೆಲ್ಲಾ ಇವರ ಅಧಿಷ್ಠಾನದಲ್ಲಿ ಶ್ರೀ ವಾಯುದೇವರ ಮೂಲಕ ಸಾಕ್ಷಾತ್ ಶ್ರೀ ವೇಂಕಟೇಶನೇ ಎಲ್ಲಾ ಕಾರ್ಯವೆಸಗಿರುವನೆಂಬುದನ್ನು ಮಾತ್ರ ಜ್ಞಾನಿಗಳು ಮರೆಯಲಾಗದು

ವಿಜಯದಾಸರು ಹರಿನಾಮ ಪ್ರಭಾವ ಸುಳಾದಿ, ಗುರುಭಕ್ತಿ ಸುಳಾದಿ, ರೋಗಪರಿಹಾರ ಸುಳಾದಿ, ಧನ್ವಂತ್ರಿ ಸುಳಾದಿ, ಜ್ಞಾನ ಸುಳಾದಿ, ದಾಸ ಸುಳಾದಿ, ಪೂಜಾಸುಳಾದಿ, ವ್ಯಾಕುಲ ಪರಿಹಾರ ಸುಳಾದಿ, ಪ್ರಾಣಾಗ್ನಿ ಹೋತ್ರ ಸುಳಾದಿ, ವೈರಾಗ್ಯ ಸುಳಾದಿ, ಮುಕ್ತಿಯೋಗ್ಯರ ಸುಳಾದಿ, ನಾಡಿ ಪ್ರಕರಣ ಸುಳಾದಿ, ಗುರುಮಂತ್ರ ಸುಳಾದಿ, ಭಕ್ತಿ ಸುಳಾದಿ, ನೀತಿ ಸುಳಾದಿ, ಋಣ ಸುಳಾದಿ, ಹೊಲೆಯ ಸುಳಾದಿ, ಆಸೆ ಸುಳಾದಿ, ಧ್ಯಾನಕ್ರಮ ಸುಳಾದಿ, ಭೋಜನಾನುಸಂಧಾನ ಸುಳಾದಿ, ಹರಿಭಕ್ತರ ಲಕ್ಷಣ ಸುಳಾದಿ, ಸಾಧನಾ ಸುಳಾದಿ, ಹರಿವ್ಯಾಪ್ತ ಸುಳಾದಿ, ದುರ್ಗಾ ಸುಳಾದಿ, ಸಕಲ ಗುರುಗಳ ಮೇಲಿನ ಸುಳಾದಿಗಳು, ಏಕಾದಶ್ಯಾದಿ ವ್ರತಗಳ ಸುಳಾದಿ, ತುಳಸಿ ಸುಳಾದಿ, ಸೃಷ್ಟಿಪ್ರಕರಣ ಸುಳಾದಿ, ಗಂಡಕ್ರಿಯಾ ಸುಳಾದಿ, ಪತಿವ್ರತಾಲಕ್ಷಣ ಸುಳಾದಿ, ಪೌರುಷೇಯ ಅಪೌರುಷೇಯ ಶಾಸ್ತ್ರಗ್ರಂಥ ಮಹಿಮಾ ಸುಳಾದಿ, ಬ್ರಹ್ಮಸೂತ್ರ ಭಾಷ್ಯ ಸುಳಾದಿ–ಹೀಗೆ ನೂರಾರು ಪ್ರಮೇಯಪೂರಿತ ಅನನ್ಯವಾದ ಕೃತಿಗಳನ್ನು ರಚಿಸಿ ಜ್ಞಾನಭಂಡಾರವನ್ನಿತ್ತು ಅನುಗ್ರಹಿಸಿದ ಮಹಾಮಹಿಮರಾಗಿದ್ದಾರೆ ಇವರ ಸುಳಾದಿಗಳು ಪಂಡಿತರುಗಳಿಗೂ ಎಟುಕಲಾರದಷ್ಟು ಗಹನವಾಗಿಯೂ ಸಕಲಾಗಮ ಬೋಧಕವಾಗಿಯೂ ಇರುತ್ತವೆ. ಇವರ ಎಲ್ಲಾ ಕೃತಿಗಳೂ ಕೇವಲ ವೇದಾದಿ ಶಾಸ್ತ್ರಗ್ರಂಥಗಳ ಕನ್ನಡ ತರ್ಜುಮೆಯೇ ಹೊರತು ಅವರ ಸ್ವತಂತ್ರ ಗ್ರಂಥಗಳಲ್ಲ. ಆದ್ದರಿಂದ ಇವು ಸಕಲ ಪಂಡಿತ ಪಾಮರುಗಳಿಂದ ಅತ್ಯಾವಶ್ಯಕವಾಗಿ ಸ್ವೀಕೃತವಾಗಲೇಬೇಕು.

ವಿ ಎನಲು ವಿಮಲತೆಯು
ಜ ಎನಲು ಜಯವು
ಯ ಎನಲು ಯಾಗಫಲವು
ದಾ ಎನಲು ದಾನ್ಯಫಲ
ಸ ಎನಲು ಯಮಭಟರು ನೋಯಿಸರೋ ಅವರ ಕುಲವ

ಹೀಗೆಂದು ಅವರ ಸಾಕ್ಷಾತ್ ಸಾಕುಮಕ್ಕಳಾದ ಮೋಹನದಾಸರು ವಿಜಯದಾಸಾರ್ಯರ ನಾಮಮಹಿಮೆಯನ್ನು ಬಹುವಿಚಿತ್ರವಾಗಿ ತಮ್ಮದೊಂದು ಕೃತಿಯಲ್ಲಿ ನಿರೂಪಿಸಿರುತ್ತಾರೆ. ಇದು ಅತಿಶಯೋಕ್ತಿಯಲ್ಲ, ಅಕ್ಷರಃ ಸತ್ಯವಾದುದೆಂಬುದು ಅವರ ಚರಿತ್ರೆಯಿಂದಲೇ ವ್ಯಕ್ತವಾಗುತ್ತಲಿದೆ.

ಜಗತ್ತಿಗೆ ಜ್ಞಾನಜ್ಯೋತಿ ಬೆಳಗಿಸುವ ಶ್ರೀ ಭೃಗು ಋಷಿಗಳ ಬಗ್ಗೆ ಶಾಸ್ತ್ರಗ್ರಂಥಗಳ ಉಲ್ಲೇಖ ಅನೇಕವಿವೆ. ಅವುಗಳಲ್ಲಿ ಕೆಲವನ್ನು ಜ್ಞಾಪಿಸಿ ಕೊಂಡರೆ ಮೈ ಝುಂ ಎನ್ನುವುದು "ಮಹರ್ಷೀಣಾಂ ಭೃಗುರಹಂ" ಎಂದು ಗೀತಾದಲ್ಲೂ, ಐತರೇಯ ಬ್ರಾಹ್ಮಣ, ಪಂಚವಿಂಶ ಬ್ರಾಹ್ಮಣ, ತೈತ್ತರೀಯ ಉಪನಿಷತ್, ಗೋಪಥ ಬ್ರಾಹ್ಮಣ, ಅಥರ್ವಣವೇದ, ಭಾಗವತ ತೃತೀಯಸ್ಕಂದ, ವಿಷ್ಣುಪುರಾಣ, ಪದ್ಮಪುರಾಣ, ತುಂಗಕಾರಣ್ಯ, ಬ್ರಹ್ಮಪುರಾಣ, ಮಹಾಭಾರತಾದಿ ಗ್ರಂಥಗಳಲ್ಲಿ ಭೃಗುಋಷಿಗಳ ಮಹತ್ವದ ಬಗ್ಗೆ ಸಾಕಷ್ಟು ಉಲ್ಲೇಖಿಸಲ್ಪಟ್ಟಿವೆ ಅವುಗಳನ್ನು ವಿಸ್ತರಿಸಲು ಹತ್ತಾರು ಪುಟಗಳಾಗುವುವು.

ವಿಜಯದಾಸರು ಕಾಶಿಯಲ್ಲಿ ವೇದವ್ಯಾಸರನ್ನು ಹಾಗೂ ವಿಶ್ವನಾಥನನ್ನು, ಕೊಲ್ಲಾಪುರದಲ್ಲಿ ಲಕ್ಷ್ಮೀದೇವಿಯನ್ನು, ಪಂಡರಾಪುರದಲ್ಲಿ ವಿಠಲನನ್ನು, ಮಧುರೆಯಲ್ಲಿ ಮೀನಾಕ್ಷಿಯನ್ನು, ರಾಮೇಶ್ವರದ ರಾಮಲಿಂಗನನ್ನು ಉಡುಪಿ ಕೃಷ್ಣ ಹಾಗೂ ಮುಖ್ಯವಾಗಿ ತಿರುಪತಿಯಲ್ಲಿ ಸ್ವಾಮಿಯಾದ ವೆಂಕಟೇಶನನ್ನು ಕೊಂಡಾಡಿ ಅವರ ದರ್ಶನವನ್ನೇ ಮಾಡಿ ಪುನೀತರಾಗಿದ್ದಾರೆ

ದಾಸ ಪುರಂದರನ ಪಾದವ ಪೊಂದಿದೆನು
ಏಸು ಜನ್ಮನ ಪುಣ್ಯರಾಶಿ ಫಲಿಸಿತೋ ಎನಗೆ
ಕಾಸಿಗಾಗದವನು ಸಾಸಿರಕೆ ಬೆಲೆಯಾದೆ
ಸೂಸುವ ಭಕುತಿಯಲಿ ಶ್ರೀಶನನಾಮ ಪೀ
ಯೂಷವನು ಉಂಡೆನೊ ಉಚಿತ ಸಾಧನದಿಂದ
ಲೇಸಾಗಿ ಪುರಂದರದಾಸರನ ಪಾಲಿಸಿದ
ಸಾಸಿರಪಾದ ನಮ್ಮ ವಿಜಯ ವಿಠಲನ್ನ
ದಾಸರಾ ದಾಸನಾದೆ ದೋಷ ವಿರಹಿತನಾದೆ ॥ ೧ ॥

ಸುರಲೀಲನಾಗಿ ನಿಕಂಪನೆಂದೆನಿಸಿ
ದ್ವಾಪರಾದಲ್ಲಿ ಜನಿಸಿದೆ ಕೆಲವು ದಿನ ಬಿಡದೆ
ತರುವಾಯ ವರ ಕಲಿಯುಗದಲಿ ಈಗ ಜನನ
ಮರಣವಾಗುತ ಬಂದು ಧರೆಯೊಳು ಮೆರೆದು
ಹರಿಕೃಪೆಯಿಂದಲಿ ಇವರ ಸದನದೊಳಗೆ
ತುರುಕರುವು ಆಗಿ ಜನಿಸಿದೆನು ಸುಕೃತದಿಂದ
ಸಿರಿಪತಿ ವಿಷ್ಣು ನಮ್ಮ ವಿಜಯವಿಠಲನದಾಸರು
ಪೇಳಲು ಕವನ ಎರಗಲು ಕರ್ಣಕೆ ॥ ೩ ॥

ಶ್ರವಣಫಲದಿಂದ ಅವನಿಯೊಳಗೆ ಎರಡು
ಅವನೀಸುರರ ಜನ್ಮವೀಗ ಧರಿಸಿದೆ
ಕವನ ಪೇಳಿದೆ ಸಂಸಾರದಲಿ ಇದ್ದು
ಅವಸರನಾಗಿ ಅವಧಿ ಇಲ್ಲದೆ ಮತ್ತೆ
ಅವನಿಯೊಳಗೆ ಒಂದೆ ಭವದೂರನಾಗಿ
ಕವಿನಾಮ ವಿಜಯವಿಠಲನ್ನ
ದಿವ್ಯನಾಮವನು ಕೊಂಡಾಡುವ ಅಧಿಕಾರಿ ನಾನಾದೆ ॥ ೪ ॥

ಎಪ್ಪತ್ತುಮೂರು ವರ್ಷ ಹೊಪ್ಪಾದೇಹದಲಿದ್ದ
ಇಪ್ಪತಾಯದಲಿ ಅದರಪ್ಪಂತೆ ಬಾಳಿ ತಿರುಗಿ
ಇಪ್ಪತ್ತುವಂದು ದಿನ
ತಪ್ಪದಲೆ ಸುಲುಭ ನರಕ
ಒಪ್ಪದಲೆ ನೋಡಿ ತಿರುಗಿ ಒಪ್ಪೆನಯ್ಯಾ ಧರೆಗೆ
ಅಪ್ಪಾನಪ್ಪ ಮಹೀಭರ್ತ ವಿಜಯವಿಠಲ
ಒಲಿದಿಪ್ಪನು ಇಂದಿನ ಕಿಂತಧಿಕವಾಗಿ ಎನಗೆ ಬಿಡದೆ ॥ ೫ ॥
ಗುರುಕೃಪೆಯಿಂದಲಿ ಅರಿದೆ ಈ ತೆರದಿಂದೆ
ಪರಮಾತ್ಮ ವಿಜಯವಿಠಲನಂಘ್ರಿಸೇರಿದೆನೊ ॥ ೬ ॥

ಇವರದು 15ನೆ ಸ್ಥಾನಮಾನ ಕಕ್ಷೆ ತಾರತಮ್ಯದಲ್ಲಿ, ಇವರು ಗಣೇಶಾಂಶರಾದ ಗೋಪಾಲದಾಸರಿಗೂ, ಪ್ರಹ್ಲಾದಾಂಶರಾದ ಜಗನ್ನಾಥದಾಸರಿಗೂ, ಪ್ರಸನ್ನ ವೆಂಕಟದಾಸರಿಗೂ ವ್ಯಾಸವಿಠಲದಾಸರಿಗೂ, ಮೋಹನದಾಸರಾದಿ ಅನೇಕ ಜ್ಞಾನಿಗಳಿಗೆ ಗುರುಸ್ಥಾನದಲ್ಲಿದ್ದಾರೆ. ಇನ್ನು ವಿಜಯದಾಸರ ಸಾಹಿತ್ಯ ವೈಭವವನ್ನು ಸ್ವಲ್ಪ ಗಮನಿಸೋಣ

ಒಮ್ಮೆ ವಿಜಯದಾಸರು ತಿರುಪತಿಗ ಬಂದು ಕಾಲುನಡಿಗೆಯಲ್ಲಿ ಕೃತಿಗಳನ್ನು ಹಾಡುತ್ತಾ ಬೆಟ್ಟವನ್ನು ಹತ್ತಿ ಬೆಳಗಿನ ಝಾವಕ್ಕೆ ಮುಂಚೆಯೇ ಸ್ವಾಮಿಯ ಗುಡಿ ಸಮೀಪಿಸಿ ಪ್ರಶಾಂತ ವಾತಾವರಣದಲ್ಲಿದ್ದಾಗ ತಮ್ಮ ಕೃತಿಯಿಂದ ಉದಯರಾಗ ಹೇಳುತ್ತಾ ಸ್ವಾಮಿಯ ನೆಬ್ಬಿಸಿದರು.

ಭಕ್ತಜನ ಸಂರಕ್ಷಣ ॥ ಪ ॥

ಭಕ್ತಜನ ಸಂರಕ್ಷ ಭವದುರಿತ ಸಂಹಾರಿ ।
ಭಕ್ತರಾಸುರಧೇನು-ತರುವೆ ಚಿಂತಾಮಣಿಯೆ ।
ಭಕ್ತರಾಧೀನನೆಂಬುವ ಬಿರುದು ಅನುಗಾಲ
ಪೊತ್ತ ತಿಮ್ಮಪ್ಪ ಏಳೋ ಬೆಳಗಾಯಿತು ॥ಅ॥
ಅಂಬರವು ತಾಮ್ರಮಯವಾಗೆ
ಗರುಡಾಗ್ರಜನು
ಇಂಬಿನಲಿ ತಲೆದೋರಿ ಕಿರಣಗಳು ಹರಡಿದವು
ಅಂಬುಜಾವಿರೋಧಿ ಕಳೆಗುಂದಿ
ತಾರಾನಿಕರವಂಬರದಿ ರೂಹು ಮಾಸಿ
ಕುಂಭಿಣಿಯು ಮುಸುಕಿರ್ದ ಕತ್ತಲೆ
ಹರಿದು ಪೋಗೆ
ಅಂಬುಜ ದಳಕೆ ಮರಿದುಂಬಿಗಳು ಎರಗಿದವು
ತಾಮ್ರಚೂಡವು ಧ್ವನಿಮಾಡಿ ಕೂಗಿತು
ಸರಸಿಜಾಂಬಕ ಮಂಚದಿಂದೇಳೋ ॥೧॥

—ಎಂದು ಮುಂತಾಗಿ 8 ನುಡಿಗಳಿಂದ ವಿಚಿತ್ರವಾಗಿ ಕೊಂಡಾಡುತ್ತಾ ಕೊನೆ ನುಡಿಯಲ್ಲಿ ನಿಂದಾಸ್ತುತಿ ಮಾಡುತ್ತಾ –

ನಿದ್ರೆಗೆನೆಹಾಕದಿರೊ ನೀರೊಳಗೆ ನೀನಿರೊ ಉ
ಪದ್ರ ಭೂಮಿಗೆ ಕಳೆಯೊ ಕಶ್ಯಪನ
ಸುತನಳಿಯೊ ಸ
ಮುದ್ರರಾಣಿಯ ಪಡೆಯೊ ರಾಮರಾಯರ
ತಡೆಯೊ ಮುದ್ರೆಭೂಮಿಜೆಗೆ ಕಳುಹೊ
ಅದ್ರಿಯನು ಉದ್ಧರಿಸೊ ಮುಪ್ಪುರವ
ಸಂಹರಿಸೊ ಕಲಿ
ಕ್ಷುದ್ರ ಕಳೆನಿದ್ರೆ ಸಾಕೆಂದು ಶ್ರುತಿ ಸಾರುತಿವೆ
ಭದ್ರಮೂರುತಿ ವಿಜಯ ವಿಠಲ ವೇಂಕಟ
ಕಾದ್ರವೇಯ ಹಾಸಿಗೆಯಿಂದೇಳೋ ॥೯॥

ಎಂದು ದಶಾವತಾರವನ್ನೇ ನಿಂದಾಸ್ತುತಿ ಮೂಲಕ ತಿಳಿಸಿದರು.

ವಿಜಯದಾಸರು ಹಾಗೇ ಧ್ಯಾನಾಸಕ್ತರಾಗಿ ಅಲ್ಲೇ ನಿಂತು ಬಹು ಹೊತ್ತಿನ ನಂತರ ಕಣ್ಣು ತೆರೆದು ದರ್ಶನಾಗಿ ಮುಂದುವರೆದರು. ಆ ಹೊತ್ತಿಗೆ ದರ್ಶನಕ್ಕಾಗಿ ನಿಯೋಗೊಳಿಸಿದ್ದ ಕಾಲ ಮೀರಿದ್ದರಿಂದ ಚಾರರು ಇವರನ್ನು ಬಾಗಿಲಲ್ಲೇ ತಡೆದರು, ಒಳಗೆ ಬಿಡಲಿಲ್ಲ. ಆಗ ವಿಜಯ ದಾಸರು ಮತ್ತೊಂದು ಕೃತಿಯಿಂದ–

ನಿನ್ನ ದರುಶನಕೆ ಬಂದವನಲ್ಲವೊ ಮಹಾ ॥ ಪ ॥

ಪುಣ್ಯವಂತರ ದಿವ್ಯ ಚರಣ ನೋಡಲಿ ಬಂದೆ ॥ ಅ ॥

ಎಲ್ಲೆಲ್ಲಿ ನೋಡೆ ನೀನೆ ವ್ಯಾಪ್ತನಾಗಿರಲಿಕ್ಕೆ
ಇಲ್ಲಿಗೇ ಬಾಹ ಕಾರಣವಾವುದೊ
ಸೊಲ್ಲಿಗೆ ಕಂಬದೊಳು ತೋರಿದ ಮಹಾಮಹಿಮ
ಅಲ್ಲಿ ಇಲ್ಲೀನಯ್ಯ ಬಲ್ಲ ಭಕುತರಿಗೆ ॥ ೧ ॥

ನೀನಿದ್ದ ಸ್ಥಾನದಲಿ ಸರ್ವ ಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸಕಲ ತೀರ್ಥ
ನೀನಿದ್ದ ಸ್ಥಾನದಲಿ ಸಮಸ್ತ ಸಾತ್ವಿಕರು
ನಾನಿತ್ತ ಬಂದದ್ದು ನಿನಗೆ ತಿಳಿಯದೇ ಪ್ರಭುವೆ ॥ ೨ ॥

ಧರಿಸಿ ತಿರುಮಲರಾಯ ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ನೆರೆಹೊರೆಯಲಿ
ಒಲಿದು ಭಕುತರಿಗಾಗಿ ಮದುವೆ ಹವಣಿಸಿಕೊಂಡೆ
ಸುಲಭ ದೇವರದೇವ ವಿಜಯವಿಠಲರೇಯ ॥ ೩ ॥

ಎಂದು ನಿಂದಾಸ್ತುತಿ ಮಾಡುತ್ತಲಿದ್ದರೂ ಆ ಪರಮಾತ್ಮನ ಲೀಲೆಯನ್ನು ಶಾಸ್ತ್ರೋಕ್ತವಾಗಿಯೆ ಹೊಗಳಿದರು

ಅಂದು ಸ್ವಾಮಿಗೆ ಬ್ರಹ್ಮೋತ್ಸವ. ತಮ್ಮ ಹೃದಯದಲ್ಲಿ ರಥಾರೂಢನಾದ ಸ್ವಾಮಿಯನ್ನು ತಮ್ಮ ಭಕ್ತಿಪಾಶದಿಂದ ಕಟ್ಟಿ ನಿಲ್ಲಿಸಿಯೇ ಬಿಟ್ಟರು. ಏನೇನು ಶಕ್ತಿ ಪ್ರಯೋಗಿಸಿದರೂ ಅಂದು ಆ ಬ್ರಹ್ಮರಥ ಅಲುಗದೆ ಮೂಕನೊಬ್ಬನ ಮೇಲೆ ಬಂದು ವಿಜಯರಾಯರನ್ನ ಆಹ್ವಾನಿಸಲು ತಿಳಿಸಿದ ಮಹಂತರು ವೈಭವದಿಂದ ವಿಜಯರಾಯರನ್ನ ರಥ ಸಮೀಪಕ್ಕೆ ಆಹ್ವಾನಿಸಲು

ಸಾಗಿಬಾರಯ್ಯ ನೀನು ಗೋವಿಂದ ವೆಂಕಟ ॥ ಪ ॥

ಸಾಗಿಬಾರಯ್ಯ ಭವರೋಗದ ವೈದ್ಯನೆ।
ಬಾಗಿ ನಿನಗೆ ಚೆನ್ನಾಗಿ ನುತಿಪೆನೆಂದು
ಭಾಗೀರಥಿ ಪಿತ ಭಾಗವತರ ಸಂ।
ಯೋಗರಂಗ ಉರಗಾಗಿರಿ ವೇಂಕಟ ॥ ಅ ॥

ರಥದ ಮಧ್ಯದಲಿಪ್ಪನೆ ರಥಾಂಡಜವಾಹನನೆ
ರಥಾಂಗಪಾಣಿಯೆ ದಶರಥ ನೃಪಬಾಲ
ಪಾರ್ಥಗೆ ಒಲಿದವನ ರಥವನಡೆಸಿ ಅತಿ
ರಥ ಮಹಾರಥರ ವಿರಥರ ಮಾಡಿ ಗೆಲಿಸಿದೆ
ಪ್ರಥಮದೈವವೆ ಮನ್ಮಥ ಪಿತ ದೈತ್ಯರ
ಮಥನ ಭಕ್ತರ ಮನೋರಥನೆ ತಾರಾ
ಪಥವರ್ಣನೆ ತವಕಥಾಶ್ರವಣದಲಿ ಸು
ಪಥವನು ತೋರಿಸು ಪ್ರಥಮಾಂಗ ಒಡೆಯ ॥ ೧ ॥

ಬೊಮ್ಮ ಮೊದಲು ಮನುಜೋತ್ತಮರು ಕಡೆಯಾಗಿ
ನಿಮ್ಮ ದಾಸರು ಅವರ ಸಮ್ಮಂಧಿಗಳ ಪಾದ
ನೆಮ್ಮಿಕೊಂಡಿರುವಂಥವನು ದಾಸ ಪೂರ್ಣ
ತ್ತ್ವವ್ಯಾನೇಕ ಗುಣಮಹಿಮ್ಮ ವಿಭೂಷಿತ
ರಮ್ಮೆ ಧರಣಿ ದೇವಿ ಇಮ್ಮಹಿಷೇರ ಕೂಡಿ
ಸಮುಖನಾಗುತ ಸುಮ್ಮನೆ ಬಾ ಬಾ
ಹಿಮ್ಮೆಟ್ಟದೆ ಸಿರಿ ವಿಜಯವಿಠಲ ಅನು
ಪಮ್ಮ ಚರಿತ ಪರಬೊಮ್ಮ ತಿರುಮಲೇಶ ॥ ೨ ॥

ಎಂದು ಮನಃಸಾಗಿ ಕೊಂಡಾಡುತ್ತಿರಲು ಆ ಸ್ವಾಮಿಯ ವಿಚಿತ್ರರಥ ಯಾರೂ ಮುಟ್ಟದಿದ್ದರೂ ತಾನಾಗಿ ಚಲಿಸತೊಡಗಿತು! ಹೀಗೆ ಶ್ರೀ ವೆಂಕಟಾಚಲಸ್ವಾಮಿಗೆ ಅವಿಚ್ಛಿನ್ನ ಭಕ್ತಾಗ್ರೇಸರರು ನಮ್ಮ ವಿಜಯದಾಸರು ಆ ಸ್ವಾಮಿ ಮೇಲೆ ನೂರಾರು ಕೃತಿ, ಸುಳಾದಿಗಳನ್ನು ರಚಿಸಿರುತ್ತಾರೆ.

ಕೊನೆಗೆ ವಿಜಯದಾಸರು ಶ್ರೀವೆಂಕಟೇಶನ ಮೇಲೆ ರಚಿಸಿದ ಮಂಗಳಪದ ಒಂದನ್ನು ನೋಡೋಣ ಎಷ್ಟು ಚಮತ್ಕಾರವಾಗಿದೆ ಅದು.

ಜಯ ಮಂಗಳಂ ನಿತ್ಯ ಶುಭಮಂಗಳಂ ॥ ಪ ॥

ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯುಲುಂಬ
ಕೊಳಗದಲಿ ಹಣಗಳನು ಅಳೆದುಕೊಂಬ
ಇಲ್ಲಕಾಸು ಎಂದು ಸುಳ್ಳು ಮಾತಾಡಿದರೆ
ಎಲ್ಲವನು ಕಸುಗೊಂಬ ಕಳ್ಳಧೊರೆಗೆ ॥ ೧ ॥

ತನ್ನ ನೋಡೇನೆಂದು ಮುನ್ನೂರುಗಾವುದ ಬರೆ
ತನ್ನ ಗುಡಿಯ ಪೊಕ್ಕ ಜನರಿಗೆಲ್ಲಾ
ಹೊನ್ನು ಹಣಗಳ ಕೊಂಡು ತನ್ನ ದರುಶನ ಕೊಡದೆ
ಬೆನ್ನೊಡೆಯ ಹೊಯಿಸುವ ಅನ್ಯಾಯಕಾರಿಗೆ ॥ ೨ ॥

ಗಿಡ್ಡ ಹಾರವನಾಗಿ ಒಡ್ಡಿ ದಾನವ ಬೇಡಿ
ದುಡ್ಡು ಕಾಸುಗಳಿಗೆ ಕೈಯನೀಡಿ
ಅಡ್ಡಬಿದ್ದ ಜನರ ವಿಡ್ಡೂರಗಳ ಕಳೆದು
ದೊಡ್ಡವರವನಾಳ್ವ ಸಿರಿ ವಿಜಯವಿಠಲಗೆ ॥ ೩ ॥

ವಿಜಯದಾಸರ ಸಾಹಿತ್ಯಲಹರಿ ಅವರ್ಣನೀಯವಾದುದು. 'ಅ' ಇಂದ 'ಕ್ಷ' ಕಾರ ಪರ್ಯಂತವಾದ ಪ್ರಾಸಾದಿಕ ವಾಣಿಯಲ್ಲಿವೆ.

ವಿಜಯದಾಸರ ಸಾಹಿತ್ಯದಲ್ಲಿ ವಿಶ್ವ ಸಾಹಿತ್ಯವೇ ತುಂಬಿದೆ ವೇದ, ಉಪನಿಷತ್ತು, ಇತಿಹಾಸ, ಪುರಾಣ, ಅರ್ಥಶಾಸ್ತ್ರ, ಸಂಗೀತ ಶಾಸ್ತ್ರ, ವ್ಯಾಕರಣ, ಛಂದಸ್ಸು, ಅಲಂಕಾರಾದಿಗಳು ರಸಸ್ಥಾಯಿ, ಅಂಗ ಉಪಾಂಗ ರಸಾದಿಗಳಿಂದ ತುಂಬಿ ತುಳುಕಾಡುತ್ತಲಿವೆ. ಭಾಷಾ ಲಾಲಿತ್ಯ, ಭಾಷಾಪ್ರೌಢಿಮೆ, ಪ್ರಾಸ, ಅನುಪ್ರಾಸ ಆದಿಮಧ್ಯ ಅಂತ್ಯಪ್ರಾಸಾದಿಗಳ ಸೊಬಗಿನಿಂದ ಕೂಡಿವೆ ಇವರ ಕವಿತೆ ಇವರ ಸಾಹಿತ್ಯದಲ್ಲಿ ಸಮಾಧಿ, ಗುಹ್ಯದರ್ಶನ ಭಾಷಾಕ್ರಿಯಾದಿ ಅನುಕರಣವಿದೆ. ಜನಪದ ಸಾಹಿತ್ಯ ಪ್ರಯೋಗವಿದೆ ಸಾಂಗತ್ಯ ಪ್ರಾಸಾದಿಕ ವಾಣಿ ಇದೆ. ಮುಖ್ಯವಾಗಿ ಪರಮಾತ್ಮನ ವರ್ಣನೆಯಲ್ಲಿ ನವ ರಸಾಲಂಕಾರಗಳಿವೆ.

ವಿಜಯದಾಸರ ಕೃತಿಗಳಲ್ಲಿ ನವರಸ ಎತ್ತ ಕಾಣುತ್ತ ವಿರಾಜಿಸುತ್ತಲಿದೆ ಕೃಷ್ಣನ ರಾಸಕ್ರೀಡೆ ವರ್ಣನೆಯಲ್ಲಿ ಶೃಂಗಾರರಸವನ್ನೂ, ನರಸಿಂಹ, ಭೀಮಸೇನ ದೇವರ ವರ್ಣನೆಯಲ್ಲಿ ವೀರರಸವನ್ನೂ, ಗೋಪಿಕಾಸ್ತ್ರೀಯರ ಭಕ್ತಿಯಲ್ಲಿ ಕರುಣಾರಸವನ್ನೂ, ರಾಮಕೃಷ್ಣ, ಹನುಮ ಭೀಮಾದಿಗಳ ಅವತಾರದಲ್ಲಿ ಅದ್ಭುತ ರಸವನ್ನೂ ರಾವಣ ಹನುಮನ ಸಂವಾದ, ಉರುಟಣೆ ಪದಗಳಲ್ಲಿ ಹಾಸ್ಯರಸವನ್ನೂ, ಅಂತೆಯೆ ಅಲ್ಲಲ್ಲಿ ಭೀಭತ್ಸ, ವೀರ, ರೌದ್ರ, ಶಾಂತಾದಿ ರಸಮಯ ಕೃತಿಗಳಿವೆ

ಇಂತಹ ಮಹಾನುಭಾವರು ಘೋರತರವಾದ ಈ ಕಲಿಯುಗದಲ್ಲಿ ಅವತರಿಸಿ ಕೇವಲ ಬಡತನ ಬೇಗೆ ಅನುಭವಿಸಿದರೂ ಭಗವಂತನಿಂದಲೇ ಅಂಕಿತ ಸ್ವೀಕರಿಸಿ ಸುಜೀವಿಗಳಿಗೆ ಶಾಸ್ತ್ರಜ್ಞಾನವನ್ನುಂಟುಮಾಡಿ ಅವರ ಮೇಲೆ ಅನುಕಂಪದಿಂದ ಉದ್ಧರಿಸಿ, 73 ವರ್ಷಗಳ ತುಂಬುಜೀವನ ನಡೆಸಿ ಕೊನೆಗೆ ಭಾಸ್ಕರ ಕ್ಷೇತ್ರವೆನಿಸಿದ ಚಿಪ್ಪಗಿರಿಯಲ್ಲಿ ಯುವ ಸಂವತ್ಸರದ ಕಾರ್ತೀಕ ಶುದ್ಧ ದಶಮಿ ಗುರುವಾರದಂದು ಶಾಶ್ವತವಾಗಿ ಭಕ್ತರನ್ನು ಅನುಗ್ರಹಿಸುತ್ತಾ ನೆಲಸಿದರು ಈ ಮಹಾನುಭಾವರು ಜಗತ್ತಿನ ಎಲ್ಲ ಸುಜೀವಿಗಳನ್ನು ಅನವರತ ರಕ್ಷಿಸಲಿ.

( 16ನೇ ಪುಟದಿಂದ )

ಗಳ ಗುರಿಯನ್ನು ನಿರ್ಧರಿಸಲಾಗಿದೆ. ಇದ ರಿಂದ ಸಾಮಾನಾಧಿಕರಣ್ಯ ಸ್ಥಿರವಾಗಿ ಉಳಿಯಬೇಕಾದರೆ, ವೈಯಧಿಕರಣ್ಯವನ್ನು ಕ್ರಮಕ್ರಮವಾಗಿ ಕೊರೆದು ಈಶ್ವರನಲ್ಲಿ ಏಕಮಾತ್ರ ದ್ರವ್ಯತ್ವಭಾವತ್ವವನ್ನು ಕೈಬಿಡಬೇಕಾಗುತ್ತದೆ. ಈ ದೋಷತ್ಯಾಗ ಮುಕ್ತಿಲೋಕದಲ್ಲಿ ನಿಜವಾಗಿಯೂ ಏರ್ಪಡುತ್ತಿದ್ದಾಗಲೂ ಲೀಲಾವಿಭೂತಿಯಲ್ಲಿರುರುವಾಗ, ಈ ಅಂಶವನ್ನು ಧ್ಯೇಯವಾಗಿ ಇಟ್ಟು ಕೊಂಡು ತದನುಗುಣವಾಗಿ ಅನುಷ್ಠಾನವನ್ನು ಕೈಗೊಳ್ಳಬೇಕಾಗುತ್ತದೆ. ಲೀಲಾವಿಭೂತಿ ಪ್ರಯೋಗಶಾಲೆ ಮುಕ್ತಿಲೋಕ ಅನುಭವರಂಗವಾದುದರಿಂದ ಅದನ್ನು ಪ್ರಯೋಗಶಾಲೆಯನ್ನಾಗಿ ಬಳಸಿ ಕೊಳ್ಳಲು ಎಂದೆಂದಿಗೂ ಯಾವವಿಧದಲ್ಲೂ ಸಾಧ್ಯವಿಲ್ಲ. ವ್ಯಧಿಕರಣವೆಂದರೆ ಸಮಾನಾಧಿ ಅಂಶತ್ಯಾಗ ಅದು ಪೂರ್ಣವಾಗಿರಬಹುದು, ಅಥವಾ ಅಂಶತಃ ಇರಬಹುದು. ಅದರಲ್ಲಿ ಮುಖ್ಯವಾದುದು ಸ್ವರೂಪಾಂಶ ಮತ್ತೊಂದು ವೃತ್ತ್ಯಂಶ. ಶ್ರೀಭಾಷ್ಯದಲ್ಲಿ ಮೇಲುನೋಟಕ್ಕೆ ತೋರುವುದು ವೃತ್ತ್ಯಂಶದ ವಿಚಾರ. ಆದರಲ್ಲಿ ನಿಜವಾಗಿಯೂ ಉಳಿದುಕೊಂಡಿರುವುದು ಸ್ವರೂಪ ವಿಷಯವಾದ ಅಂಶದ ತ್ಯಾಗ ಅಂದರೆ ಮೇಲ್ನೋಟದಲ್ಲಿ ಮಮಕಾರನಿವೃತ್ತಿ ಒಳನೋಟದಲ್ಲಿ ಅಹಂಕಾರನಿವೃತ್ತಿ ಆದ್ದರಿಂದ ಶ್ರೀಭಾಷ್ಯಗ್ರಂಥ ಸಾಮಾನಾಧಿಕರಣ್ಯವನ್ನು ಆಧಾರವಾಗಿ ಇಟ್ಟುಕೊಂಡು, ಅದರ ಸಾಧನೆಗೆ ಕ್ರಮೇಣ ಮಮಕಾರತ್ಯಾಗ ಹಾಗೆಯೇ ಅಹಂಕಾರತ್ಯಾಗವನ್ನು ಪ್ರತಿಪಾದಿಸಿ ತನ್ಮೂಲಕ ಏಕೈಕ ಆತ್ಮನಾದ ಈಶ್ವರನಿಗೆ ಚೇತನವೂ ಅಚೇತನವಂತೆ ಶರೀರವೆಂದು ನಿಷ್ಕರ್ಷಿಸಿ ವೇದಾಂತ ಶಾಸ್ತ್ರಕ್ಕೆ ಏರ್ಪಟ್ಟ ಶಾರೀರಕ ಎಂಬ ಪದವನ್ನು ಸಮಂಜಸವಾಗಿ ಅರ್ಥಮಾಡಲಾಗಿದೆ. ಆದ್ದರಿಂದ "ಯತೋ ವಾ ಇಮಾನಿ ಭೂತಾನಿ" ಎಂಬ ವಾಕ್ಯದ ಭಾವವೂ ಸಂಗತವಾಗುತ್ತದೆ. ವಿಶೇಷಣವು ವಿಶೇಷ್ಯವೂ ಎಂದಿಗೂ ಸ್ವರೂಪವಿಕಾರವನ್ನು ಹೊಂದಲಾರದುದರಿಂದ ಪ್ರತ್ಯೇಕವಾಗಿ ವಿಶೇಷಣ ಪದಾರ್ಥ ಉಳಿಯಲಾರದುದರಿಂದ, ಶ್ರೀಭಾಷ್ಯದ ನಿಲವು ವಿಶಿಷ್ಟಾದ್ವೈತವಾಗುತ್ತದೆ. ಈ ಭಾವನೆಗೆ ಕಾರಣವಾದ ಸಂಬಂಧ 'ಅಪೃಥಕ್‌ಸಿದ್ಧಿ' ಪ್ರತ್ಯೇಕವಾಗಿ ಇರಲಾಗದಿರುವಿಕೆ. ಇದು ವಿಶೇಷಣಭೂತವಾದ ಚೇತನ ಮತ್ತು ಅಚೇತನವರ್ಗಕ್ಕೆ ಶಾಶ್ವತವಾದ ಚಿಹ್ನೆ–ಪೃಥಕ್‌ಸ್ಥಿತಿ ಪೃಥಕ್ ಪ್ರತೀತಿ ಅನರ್ಹತ್ವಂ ಪೃಥಕ್‌ವ್ಯವಹಾರ ಅನರ್ಹತ್ವಂ ಚ ಜಗತಃ". ಆದ್ದರಿಂದಲೇ ಪರಬ್ರಹ್ಮವನ್ನು ವರ್ಣಿಸುವಾಗ ಶಾರೀರಕ ಎಂಬ ಶಬ್ದವನ್ನು ಬಳಸಲಾಗಿದೆ. ಆದ್ದರಿಂದ ಶ್ರೀಭಾಷ್ಯಕ್ಕೆ "ಶಾರೀರಕ ಮೀಮಾಂಸಾ ಭಾಷ್ಯಂ" ಎಂದು ಹೆಸರಾಗಿ ರಾಮಾನುಜರ ನಿರೂಪಣೆ " ಸಮಂಜಸ ' ಎಂದು ನಿರ್ಣಯಿಸಲಾಗಿದೆ.




# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಸುಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

( 12ನೇ ಪುಟದಿಂದ )

"ಪ್ರಾಣೇಶ್ವರ !ಯೋಗ ಶಕ್ತಿ ಹಾಗೂ ತ್ರಿಗುಣಾತ್ಮಕ ಮಾಯೆಯ ಮೇಲೆ ಪೂರ್ಣ ಅಧಿಕಾರವನ್ನು ಪಡೆಯುವಷ್ಟರಿಂದಲೇ ನಾನು ತೃಪ್ತಳಲ್ಲ. ಹೆಣ್ಣಿನ ಶೋಭೆಯು ಸಂತಾನದಲ್ಲಿದೆ ಆದುದರಿಂದ ನಾನು ಸಂತಾನಾಪೇಕ್ಷಿಯಾಗಿದ್ದೇನೆ!!

ಎಂದಾಗ, ಕರ್ದಮನು ಸಂತೋಷಗೊಂಡು, ತನ್ನ ತಪೋಮಹಿಮೆಯಿಂದ ಒಂದು ಸುಂದರವಿಮಾನವನ್ನು ಸೃಷ್ಟಿಸಿದನು. ಅದರಲ್ಲಿ ಎಲ್ಲರೀತಿಯ ಅನುಕೂಲಗಳಿದ್ದು ಸುಶೋಭಿತವಾಗಿತ್ತು. ದಂಪತಿಗಳಿಬ್ಬರೂ ಅದರಲ್ಲಿ ಕುಳಿತು ಕೆಲವು ಕಾಲ ಸಂತೋಷದಿಂದ ಭೂಪ್ರದಕ್ಷಿಣೆ ಮಾಡಿದರು ದೇವೋದ್ಯಾನ, ತ್ರಿಲೋಕಗಳಲ್ಲಿನ ಸುಂದರತಮ ಪ್ರದೇಶಗಳನ್ನು ಸಂದರ್ಶಿಸಿದರು. ನಂತರ ಸರಸ್ವತೀನದೀತೀರವನ್ನು ಸೇರಿ ಆ ನದಿಯಲ್ಲಿ ಇಬ್ಬರು ಸ್ನಾನಮಾಡಿದರು. ಇದರ ಪರಿಣಾಮವಾಗಿ ದೈವನಿಯಾಮಕ ಸುಲಗ್ನದಲ್ಲಿ ಗರ್ಭಧರಿಸಿ ಕ್ರಮವಾಗಿ ಒಂಬತ್ತು ಮಂದಿ ಕುವರಿಯನ್ನು ದೇವಹೂತಿಯು ಹೆತ್ತಳು.

ಈ ರೀತಿಯಲ್ಲಿ ತನ್ನ ಪ್ರತಿಜ್ಞೆಯು ಪೂರ್ಣಗೊಂಡುದುದರಿಂದ ಕರ್ದಮನು ಸನ್ಯಾಸಾಶ್ರಮವನ್ನುಸ್ವೀಕರಿಸಲು ಸಿದ್ಧನಾದಾಗ, ದೇವಹೂತಿಯು ಕಣ್ಣೀರು ತುಂಬಿದ ಕಂಗಳಿಂದ ತಡೆದು ವಿನಯಯುಕ್ತಳಾಗಿ ಹೀಗೆಂದಳು.

"ಭಗವಾನ್; ಸಂತಾನ ಪ್ರಾಪ್ತಿಯಾದುದರಿಂದ ನಿಮ್ಮ ಪ್ರತಿಜ್ಞೆಯೇನೊ ನೆರವೇರಿತು. ಆದರೆ ಈ ಹೆಣ್ಣು ಮಕ್ಕಳ ವಿವಾಹ ಮಾಡಬೇಕು: ನಾನಿನ್ನೂ ನಿಮ್ಮ ಅಶ್ರಮದಲ್ಲಿ ಇದ್ದೇನೆ. ಇವೆಲ್ಲಕ್ಕಿಂತ ಹೆಚ್ಚಾಗಿ ನನಗೆ ಪುತ್ರಸಂತಾನವಾಗಬೇಕಾಗಿದೆ, ಇವನ್ನೆಲ್ಲ ನೆರವೇರಿಸಿ, ತದನಂತರ ತಾವು ಸನ್ಯಾಸವನ್ನು ಸ್ವೀಕರಿಸಬಹುದು."

ವಂಶೋದ್ಧಾರಾರ್ಥವಾಗಿ ಪುತ್ರಪ್ರಾಪ್ತಿಯ ಪ್ರಾಮುಖ್ಯತೆಯನ್ನು ತಿಳಿದ ಕರ್ದಮನು ಪತ್ನಿಯ ದೂರದೃಷ್ಟಿಯನ್ನು ಪ್ರಶಂಸಿಸಿದನು

ಪತಿಯು ಆಜ್ಞೆಯಂತೆ ಸಂಯಮ ನಿಯಮ, ತಪ, ದಾನ ಇತ್ಯಾದಿಗಳನ್ನು ಅನುಷ್ಠಾನ ಮಾಡುತ್ತಾ ಶ್ರದ್ಧಾ ಭಕ್ತಿಗಳಿಂದ ಪರಮಾತ್ಮನ ಧ್ಯಾನದಲ್ಲಿ ಲೀನಳಾದಳು

ಸಮಯಾನುಸಾರ ದೇವಹೂತಿಯು ಗರ್ಭದಿಂದ ಭಗವಾನನ ಅಂಶರೂಪವಾದ ಕಪಿಲನು ಜನಿಸಿದನು.

ಈ ಮಧ್ಯದಲ್ಲಿ, ಬ್ರಹ್ಮನು ತನ್ನ ಒಂಬತ್ತು ಪ್ರಜಾಪತಿಗಳೊಡನೆ ಅಲ್ಲಿಗೆ ಬಂದನು. ಆತನ ಆಜ್ಞಾನುಸಾರ ಕರ್ದಮನು ತನ್ನ ಒಂಬತ್ತು ಕುವರಿಯರಾದ ಕಳಾ, ಅನಸೂಯ ಶ್ರದ್ಧಾ, ಹವಿರ್ಭೂ, ಅರುಂಧತಿ, ಶಾಂತಿ, ಗತಿ ಕ್ರಿಯಾ ಖ್ಯಾತಿ ಎಂಬುವವರನ್ನು ಕ್ರಮವಾಗಿ ಮರೀಚಿ. ಅತ್ರಿ, ಅಂಗೀರಸ ಪುಲಸ್ತ್ಯ ವಶಿಷ್ಠ, ಅಥರ್ವಮುನಿ, ಪುಲಹ, ಕ್ರತು ಭೃಗು ಎನ್ನುವ ಒಂಬತ್ತು ಪ್ರಜಾಪತಿಗಳಾದ ಮಹರ್ಷಿಗಳೊಂದಿಗೆ ಮದುವೆ ಮಾಡಿದನು.

ಶುಭ ಮುಹೂರ್ತದಲ್ಲಿ ಜನಿಸಿದ ಕಪಿಲನನ್ನು ಕರ್ದಮನು ಬೆಳೆಸಿದರೂ, ದೇವಹೂತಿಯು ಮಗನನ್ನು ತುಂಬಾ ಪ್ರೇಮ, ಆದರಗಳಿಂದ ಸಾಕಿದೊಡ್ಡವನನ್ನಾಗಿಮಾಡಿದಳು. ವಿಷ್ಣುವಿನ ಅವತಾರವೆಂದು ನಂಬಿದ್ದ ಈತನಿಗೆ ಅಗ್ನಿ ಅಧಿಕಾರ ಬರುವಷ್ಟರ ಮಟ್ಟಿಗೆ ತಾಯಿ ದೇವಹೂತಿಯು ಶ್ರಮವಹಿಸಿದಳು. ಈತನು ಸಾಂಖ್ಯ ಸೂತ್ರಗಳನ್ನು ಬರೆದ. ನಂತರದಲ್ಲಿ ತನ್ನ ತಂದೆಯಾದ ಕರ್ದಮನಿಗೆ ಉಪದೇಶ ಮಾಡಿದ. ಇದರಿಂದ ವಿರಕ್ತಿಗೊಂಡ ಕರ್ದಮನು ಸನ್ಯಾಸಾಶ್ರಮವನ್ನು ಸ್ವೀಕರಿಸಿ,ಕಾಡಿಗೆ ಹೋಗಿ, ತಪಸ್ಸು ಮಾಡುತ್ತಿದ್ದ. ನಂತರ ಪರಮ ಪದವನ್ನು ಹೊಂದಿದನು.

ಪ್ರಾಪಂಚಿಕ ವಿಷಯಗಳಲ್ಲಿ ವಿರಕ್ತಿಗೊಂಡ ದೇವಹೂತಿಯೂ ಕೂಡ ತನ್ನನ್ನು ಉದ್ಧರಿಸುವಂತೆ ಮಗ ಕಪಿಲನನ್ನು ಬೇಡಿದಳು. ಅಂತಯೇ ಆಕೆಗೆ ಯೋಗ, ಜ್ಞಾನ ಮತ್ತು ಭಕ್ತಿಗಳ ಬಗ್ಗೆ ಉಪದೇಶ ಮಾಡಿದ ಭಗವಾನ್ ಕಪಿಲನು ತನ್ನ ಅಭಿಮತವಾದ ಸಾಂಖ್ಯಮತವನ್ನು ತಿಳಿಸಿದ. ಈರೀತಿಯಲ್ಲಿ ಸಾಂಖ್ಯತತ್ತ್ವದ ಉಪದೇಶವನ್ನು ಪಡೆದ ದೇವಹೂತಿಯು ತನ್ನನ್ನುತಾನು ಧನ್ಯಳೆಂದುಕೊಂಡಳು. ಈ ಉಪದೇಶಾಮೃತವು ಶ್ರೀಮದ್ಭಾಗವತದ ತೃತೀಯ ಸ್ಕಂಧದಲ್ಲಿ ಇಪ್ಪತ್ತೈದನೆ ಅಧ್ಯಾಯದಿಂದ ಆರಂಭವಾಗಿ ಮೂವತ್ತೆರಡನೆಯ ಅಧ್ಯಾಯದವರೆಗೆ ಪೂರ್ಣಗೊಂಡಿದೆ ನಂತರ ಕಪಿಲನು ತಾಯಿಯ ಆಜ್ಞೆ ಪಡೆದು ಉತ್ತರದ ಕಡೆ ಹೊರಟು ಹೋದನು.

ದೇವಹೂತಿಯು ಅದೇ ಆಶ್ರಮದಲ್ಲಿ ಇರುತ್ತಾ ಅಷ್ಟಾಂಗಯೋಗವನ್ನು ಅನುಸರಿಸಿ, ಸತ್ಯಯುಕ್ತ ಪರಮಾತ್ಮನ ನಿಜಸ್ವರೂಪದ ದರ್ಶನ ಪಡೆದಳು. ಇದರ ಮುಖಾಂತರ ಆಕೆಯು ಮೋಕ್ಷವನ್ನು ಪಡೆದಳು.

ಬಾಲ್ಯದಿಂದಲೂ ಸನ್ಮಾರ್ಗದತ್ತ ನಡೆಯುತ್ತ, ಭೋಗ ಭಾಗ್ಯಗಳಿಗೆ ಆಸೆ ಪಡೆದೆ, ಪ್ರಪಂಚದಲ್ಲಿ ಮಗಳಾಗಿ, ಪತ್ನಿಯಾಗಿ, ತಾಯಿಯಾಗಿ, ಏನೇನು ಕರ್ತವ್ಯಗಳನ್ನು ನಿರ್ವಹಿಸಬೇಕೆಂಬುದಕ್ಕೆ ದೇವಹೂತಿಯು ಉತ್ತಮ ಉದಾಹರಣೆಯಾಗಿರುತ್ತಾಳೆ. ಸ್ತ್ರೀಯರು ಹೇಗೆ ಯೋಗಸಾಂಖ್ಯವನ್ನು ಅನುಸರಿಸಬಹುದು ಎನ್ನುವುದನ್ನು ತೋರಿಸಲು ತನ್ನ ಜೀವನವನ್ನೇ ಮುಡಿಪಾಗಿಟ್ಟ ಆದರ್ಶಪ್ರಾಯಳಾದಳು.

ದೇವಹೂತಿಯು ಸಿದ್ಧಿ ಪಡೆದ ಸ್ಥಾನವನ್ನು ಇಂದಿಗೂ ಪರಮಪವಿತ್ರವೆಂದು ನಂಬಲಾಗಿದೆ. ಸರಸ್ವತಿಯ ತಟದಲ್ಲಿರುವ ಈ ಕ್ಷೇತ್ರವನ್ನು 'ಸಿದ್ಧಪಥ' ಎಂಬ ಹೆಸರಿನಿಂದ ಕರೆಯುತ್ತಾರೆ. ಈ ರೀತಿಯಲ್ಲಿ ದೋಷರಹಿತಳಾಗಿ ಶುದ್ಧಗೊಂಡ ದೇವಹೂತಿಯು ಕೊನೆಗೆ ನದಿಯರೂಪದಲ್ಲಿ ಪ್ರವಹಿಸ ತೊಡಗಿದಳು. ಸಿದ್ಧಗಣಗಳಿಂದ ಸೇವಿಸಲ್ಪಡುವ ಈ ಕ್ಷೇತ್ರ ಹಾಗೂ ನದಿಯು ಎಲ್ಲ ರೀತಿಯ ಸಿದ್ಧಿಗಳನ್ನೂ ನೀಡುತ್ತವೆ.

(ಆಧಾರಗಳಿಂದ)



(10ನೇ ಪುಟದಿಂದ)

ಸರಕಿನೊಳಗೆ ಲಾಭವುಂಟೆ" (142) ಎಂಬುದು ಸಾಮಾನ್ಯರಿಗೂ ತಿಳಿಯುವ ವ್ಯವಹಾರ ಹೆಣ್ಣು ಕೊಟ್ಟ ಮಾವನ ಮನೆಯಲ್ಲಿರುವುದಕ್ಕಿಂತ ಸಾಯುವುದೇ ಲೇಸು ಒಂದು ತಿಂಗಳು ಗೌರವ, ಮತ್ತೆ ಹಿತನುಡಿ, ಒಳಗೆ ಅಭದ್ರನುಡಿ, ಸಣ್ಣ ಮಾತು, ಇಂತಹ ಅಳಿಯಭೋಜನಕ್ಕಿಂತ ಗೋಪಾಳವೇ ಲೇಸು. (146), ಎನ್ನುತ್ತಾರೆ. "ಸಾಕು ಸಾಕು ಮನುಜಸೇವೆ ಮಾಡಿ ಬೆಂದು ಬಳಲಿದೆನು (42)' ಎಂಬಲ್ಲಿ ಮನುಷ್ಯರ ಸೇವೆಮಾಡಿ ತೃಪ್ತಿಪಡಿಸಲು ಸಾಧ್ಯವಿಲ್ಲವೆಂಬುದು ಚಕ್ರವರ್ತಿಯ ಕೆಳಗೆ ಪಾಳೆಯಗಾರರಾಗಿದ್ದ ಅವರ ಸ್ವಾನುಭವವೇ ಇರಬೇಕು "ಅಲ್ಪದೊರೆಗಳ ಜೀತ ಎಷ್ಟು ಮಾಡಿಪರೇನು? (130], ಎಂಬಲ್ಲಿ ಆಗಿನ ಕಾಲದಲ್ಲಿ ಇದ್ದ ಜೀತ, ಅದರ ಯಾತನೆ ಅಡಗಿದೆ

## ದಂಭಾಚಾರಕ್ಕೆ ಕೆಂಡ ನುಡಿ

ದೇವರು ಧರ್ಮಗಳ ಹೆಸರಿನಲ್ಲಿ ಸಂಭಾವಿತರಂತೆ ತೋರಿಸಿಕೊಂಡು ಸ್ವಾರ್ಥಸಾಧಿಸುವ ಡಂಭಕರು ಯಾವ ಮತದವರೇ ಇರಲಿ ಅವರಿಗೆ ಕನಕರ ಚಾಟಿಯೇಟು ತಪ್ಪಿದ್ದಲ್ಲ "ಸನ್ಯಾಸಿ, ಜಂಗಮ, ಜೋಗಿ ಜಟ್ಟಿ, ಮೊಂಡ ಬೈರಾಗಿ ನಾನಾ ವೇಷವ ಕೊಂಬುವುದು ಎಲ್ಲಾ ಹೊಟ್ಟೆಗಾಗಿ" ಎಂಬಲ್ಲಿ ಆಯಾ ವೇಷಧಾರಿಗಳನ್ನು ಖಂಡಿಸಿ "ಕೆಟ್ಟ ಕೂಗನೆ ಕೂಗಿ ಹೊಟ್ಟೆಯನು ಹೊರೆಯುವಂಥ ಪೊಟ್ಟೆಗುಡುಮುಗಳೆಲ್ಲ ಪರಮ ವೈಷ್ಣವರೆ?(178) ಎಂಬಲ್ಲಿ ಹೊಟ್ಟೆ ಬೊಜ್ಜು ಬೆಳಸಿ ಧರ್ಮದ ಪ್ರದರ್ಶನ ಮಾಡುವ ವೈಷ್ಣವರನ್ನು ಅವರು ಬೈಯ್ಯುವುದು ನೋಡಿದರೆ ತನ್ನದೇ ಆದ ವೈಷ್ಣವ ಪಂಥದವರನ್ನೂ ಟೀಕಿಸುವ ಅವರ ನಿಷ್ಪಕ್ಷಪಾತ ಪ್ರವೃತ್ತಿ ಸ್ಪಷ್ಟ. ಯಾವ ಧರ್ಮದವರಾದರೇನು, ಇಂಥಹ ಠಕ್ಕರನ್ನವರು ಭಂಗಿಸುತ್ತಾರೆ

ಮೂಗು ಹಿಡಿಯುವಂತೆ ನೀರೊಳಗೆ ಮುಳುಗಿ
ಜಪಮಾಡಿ ಭಾಗವತಶಾಸ್ತ್ರಗಳನ್ನೆ ಓದಿ ಬಾಗಿ
ಪರಸತಿಯನು ಬಯಸಿ ಕಣ್ಣಿಡುವಂಥ ಯೋಗ
ತಪ್ಪಿದವರೆಲ್ಲಾ ದೇವ ಬ್ರಾಹ್ಮಣರೆ? (138)

ಎಂಬಲ್ಲಿ ಕಪಟ ಬ್ರಾಹ್ಮಣರನ್ನು ಅವರು ಕಟುವಾಗಿ ಟೀಕಿಸಿದ್ದಾರೆ. "ತೀರ್ಥಪಿಡಿದವರು ತಿರುನಾಮಧಾರಿಗಳೆ" (138) ಎಂದು ಕೇಳುವರು. "ನೇಮವಿಲ್ಲದ ಹೋಮ ವೇತಕೆ, ಡಂಬರ ತಾಂಬೂಲ, ಬೀಡಲೇಕೆ?" (17) ಅಚಲಭಕ್ತಿ ನಿರ್ಮಲವಾಗಿದ್ದರೆ ಇದೊಂದು ಬೇಡ. "ಗುಟ್ಟಿನಲ್ಲಿ ಗೋಪಾಲನ ಸ್ಮರಿಸೋ"(16) ಎಂದು ಪ್ರದರ್ಶನವಿಲ್ಲದ ಗುಪ್ತಭಕ್ತಿಯನ್ನು ಸಮರ್ಥಿಸುತ್ತಾರೆ

## ಕ್ಷುದ್ರದೇವತೆಗಳ ಆರಾಧನೆ

ಗ್ರಾಮೀಣ ಅಸಂಸ್ಕೃತಜನರಲ್ಲಿ ದೇವರ ಹೆಸರಲ್ಲಿ ಪ್ರಾಣಿವಧೆ, ಮದ್ಯಪಾನ, ವೇಷ, ಕಾಟಾಚಾರಗಳನ್ನು ಕಂಡು ರೋಸಿಹೋದ ಕನಕರು ಅಂಥವರನ್ನು ಮಾತಿನ ಮೊನೆಯಿಂದ ಚುಚ್ಚಿದ್ದಾರೆ. ಅಂತಹ ದೈವಗಳನ್ನು ನಿಂದಿಸಿದ್ದಾರೆ. "ಕೊಂಡಾಡದಿರು ಬೀದಿ ಕೂಳುಂಬ ದೈವಗಳ"(116) ಎಂದು ನಿಷೇಧಿಸಿದ್ದಾರೆ,

ಉರಿಮಾರಿ ಚಾಮುಂಡಿ ಶಕ್ತಿಗಳಿಗೆ
ಕುರಿಕೋಣನೈವೇದ್ಯ ಧೂಪಗಳಿಂದ ..
ಪೂಜಿಸುವರಯ್ಯಾ (130,)

ಇಂತಹ "ಡೊಂಬ ದೇವತೆಗಳನ್ನು ನಂಬದಿರು ಮನವೇ" (139) "ಜೊಳ್ಳು ದೇವರ ಗೊಡವೆ ಬೇಡ" (72) ಎಂದು ಸಾರಿ ಸಾರಿ ಹೇಳುತಾರೆ

ಗಾಳ ಗೂಳರೆಲ್ಲಾ ಕೂಡಿ ಖೂಳದೇವರ
ಮಾತು ಕೇಳಿ

ಹಾಳು ಮಾಡಿ ಕೈಯಲಿದ್ದ ಹೊನ್ನು ಹಣಗಳ
ಬಾಳುತಿಪ್ಪ ಕುರಿಯ, ಕೋಣನ ಬೀಳು ಬೀಳ
ಕೊರಳು ಕೊಯಿ
ಬೀಳಬೇಡಿ ನರಕಕೆಂದು ಹೇಳ ಬಂದೆನೋ(7?

ಗಾಳಗೂಳರೆಲ್ಲಾ ನೇರಿಕೊಂಡು ಕೈಲಿದ್ದ ಹಣವ ಪೋಲುಮಾಡಿ ದೇವರ ಹೆಸರಲ್ಲಿ ನಡಿಗೆ ಗಡಿ ಕಳ್ಳು ಕುಡಿದು ರಾತ್ರಿ ಬೆಳಗಾಗುವತನಕ ಮಜ ಮಾಡುತ್ತಿದ್ದರು, ಬಾಳುವ ಜೀವಂತ ಕುರಿಕೋಣಗಳ ಕೊರಳು ಕೊಯ್ದು ದೇವತೆಗೆ ಒಪ್ಪಿಸುತ್ತಿದ್ದರು, ಹೀಗೆ ಪ್ರಾಣಿವಧೆಮಾಡಿ ನರಕಕ್ಕೆ ಬೀ ಬೇಡಿರೆಂದು ಜನರಿಗೆ ಕೂಗಿಹೇಳಿದರು, ಎಲ್ಲಮ್ಮ ಹೆಸರಿನಲ್ಲಿ ಪ್ರಾಣಿವಧೆ ಮದ್ಯಪಾನವಲ್ಲದೆ ಬಸ ಅಥವಾ ದೇವದಾಸಿ ಪದ್ಧತಿ ಕಂಡು ಹೇಸಿ ರೇಗಿವರು

ಸುತ್ತಲವರ ಮಾತುಕೇಳಿ ಗುತ್ತಿಯ ಎಲ್ಲಮ್ಮ
ಗೊಲಿದ
ಬತ್ತಲಿಂದ ಬಂದವಳನ್ನು ನೋಡಿ ಎಲ್ಲರು
ಮತ್ತೆ ಬೇವಿನುಡುಗೆಯುಟ್ಟು ಮುಕ್ತಿ ತಾವು
ಪಡೆವೆವೆಂ
ತೊತ್ತು ಮಾಯಾಕಾರಿಯವಳಿಗೆ
ಛೀ ಥೂ ಎಂಬರು (72

ಎಲ್ಲಮ್ಮ ದೇವತೆಯ ಹೆಸರಲ್ಲಿ ತಾವೇ ಬತ್ತ ಕುಣಿಯುವಂತೆ ಮಾಡಿನೋಡಿ ಆನಂದಿಸಿ ಮತ್ತೆ ಅವಳನ್ನೇ ಮಾಯಗಾತಿ, ತೊತ್ತು, ಛೀ, ಥು ಎಂದು ಹಿಯಾಳಿಸಿ, ಇದೆಂತಹ ಕ್ಷುದ್ರಭಕ್ತಿ, ಹೀ ವರ್ತನೆ. ಕನಕರು ಇಂತಹದನ್ನು ಕಂಡು ಸಹಿ ಲಾರರು, ಇಂದಿಗೂ ಈ ಬಸವಿ ಪದ್ಧತಿ ಉಳಿದ ಕೊಂಡು ಬಂದಿರುವುದಲ್ಲದೆ ಈ ಅನ್ಯಾಯ ಅನ ಚಾರವನ್ನು ತಡೆಗಟ್ಟಲು ಸರಕಾರ ಕಾನೂನನ್ನೆ ಮಾಡಬೇಕಾಯಿತು. ಆದೂ ಇನ್ನೂ ಇದ ಪೂರ್ಣ ನಿಂತಂತಿಲ್ಲ

ಕನಕದಾಸರು ಕೇವಲ ಭಕ್ತಿಜ್ಞಾನ ವೈರಾಗ ಗಳ ಬೋಧಕರಲ್ಲ. ಸಮಾಜದ ಕುರೀತಿಗಳನ್ ಹೋಗಲಾಡಿಸಿ ಸನ್ಮಾರ್ಗದಲ್ಲಿ ನಡೆಸಿ ಏಳಿಗೆಯನ್ ಸಾಧಿಸಬೇಕೆಂಬ ದು ಅವರ ತೀವ್ರ ಕಳಕಳಿಯ ಗಿತ್ತು. ಸಮಾಜದಲ್ಲಿ ಸೂಕ್ಷ್ಮನಿರೀಕ್ಷಣೆ, ಅನ ಚಾರದ ಖಂಡನ, ನೀತಿಬೋಧನೆ, ಖಂಡಿಸುವ ಕಟುನುಡಿ, ಹಾಸ್ಯದ ಕಟಕಿ, ವ್ಯಂಗ್ಯ ಅವ ಕೀರ್ತನೆಗಳಲ್ಲಿ ಅಡಗಿವೆ ಒಟ್ಟಿನಲ್ಲಿ ಅವರಕಾಲ ಸಮಾಜದ ಸ್ಥಿತಿಗತಿಗಳನ್ನು ಅವರ ಹಾಡುಗಳ ಎತ್ತಿ ತೋರಿಸುತ್ತವೆ ಸ್ವಾನುಭವದಿಂದ ತುಂಬಿ ಅವರ ಹಾಡುಗಳು ಇಂದಿಗೂ ಅಷ್ಟೆ ಸಮ ಯೋಚಿತ ಆಗಿವೆ, ಮಾರ್ಗದರ್ಶಕವಾಗಿವ ಸಂಗೀತದ ಮಾಧ್ಯಮದಲ್ಲಿ ಹರಿದ ಅವರ ಸಾಹಿ ಗಂಗೆ ಜನರನ್ನು ಪಾವನಗೊಳಿಸುತ್ತದೆ.

*


# ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

## ಕಿಶೋರಜಗತ್

ನನ್ನ ಹೆಸರು ಮುಚುಕುಂದ. ನಾನು ಇಕ್ಷ್ವಾಕು ವಂಶದ ಮೌಳಿಮಣಿಯಂತೆ ಬಾಳಿದ ಮಾಂಧಾತನ ಮಗ. ಮಾಂಧಾತ ನರ್ಮದಾ ತರಂಗಿಣೀ ತೀರದಲ್ಲಿ ಅಶ್ವಮೇಧಾದಿ ಮಹಾಕ್ರತುಗಳನ್ನಾಚರಿಸಿದ್ದ ಪುಣ್ಯಜೀವಿ; ಅಷ್ಟೇ ಅಲ್ಲ; ಚಿರಕಾಲ ಪ್ರಖ್ಯಾತನಾದ ಆತನು ದಾನ ಶೂರನೆಂದು ಕೀರ್ತಿ ಪಡೆದಿದ್ದವನು. ವಂಶದ ಹಿರಿಮೆ ಹಾಗೂ ಸ್ವಂತ ಯೋಗ್ಯತೆ ಎರಡೂ ಸೇರಿದ್ದರಿಂದ ನನ್ನ ತಂದೆ ರಾಜರಾಮರ ಕೀರ್ತಿ ಭಾಜನನಾಗಿದ್ದಾನೆ.

ನಾನು ದೇವಾಸುರ ಸಂಗ್ರಾಮದಲ್ಲಿ ದೇವತೆಗಳ ನೆರವಿಗೆ ನಿಂತವನು ಇಕ್ಷ್ವಾಕು ವಂಶದವರು ಸಂಗ್ರಾಮರಂಗದಲ್ಲಿ ಅಪ್ರತಿಹತ ಪರಾಕ್ರಮ ಸಂಪನ್ನರೂ – ಅಜೇಯರೂ ಆಗಿರುವ ಸಂಗತಿ ಜಗಜ್ಜಾಹೀರಾಗಿದೆ. ಒಂದುಸಲ ದೇವತೆಗಳಿಗೂ ರಾಕ್ಷಸರಿಗೂ ಘನಘೋರಯುದ್ಧ ನಡೆಯಿತು. ಪದ್ಧತಿಯಂತೆ ದೇವತೆಗಳು ನನ್ನ ನೆರವು ಯಾಚಿಸಿದರು. ಸೈನ್ಯ ಪರಿವೃತನಾಗಿ ನಾನು ಆ ಯುದ್ಧದಲ್ಲಿ ದೇವತೆಗಳ ಪಕ್ಷಕ್ಕೆ ಜಯ ಸಂಪಾದಿಸಿಕೊಟ್ಟೆ. ಆ ಭಯಂಕರ ಯುದ್ಧವೆಲ್ಲ ಮುಗಿದು ಜಯಾಪಜಯಗಳು ನಿರ್ಣಯವಾಗುವ ವೇಳೆಗೆ ಭೂಲೋಕದಲ್ಲಿ ನನ್ನ ಮಕ್ಕಳು, ಮಿತ್ರರು, ಸೋದರರು, ಸಂಬಂಧೀಕರು, ಪತ್ನಿಯರು-ಎಲ್ಲರೂ ಮೃತರಾಗಿದ್ದರೆಂದರೆ – ಆ ಯುದ್ಧವು ಅದೆಷ್ಟು ದೀರ್ಘಕಾಲ ನಡೆಯಿತ್ತೆಂದು ನೀವು ಯೋಚಿಸಬಹುದಲ್ಲವೇ? ಕಾಲ ಪುರುಷನ ಮುಂದೆ ಯಾವುದು ತಾನೆ ನಿಲ್ಲುತ್ತದೆ? ಬಂಧು ಬಾಂಧವರು ಪತ್ನಿ ಪುತ್ರರು.... . . .ಯಾರಾದರೂ ಅಷ್ಟೆ!! ಯಾರಿಗೆ ಯಾರುಂಟು?? ಸ್ವಜನ ವಿಯೋಗದಿಂದ ಬಹುವಾಗಿ ನೊಂದ ನಾನು ಈ ಅಪಾರ ಸಂಕಟವನ್ನು ಮರೆಯುವುದಾದರೂ ಹೇಗೆಂದು ಯೋಚಿಸಿದೆ ಮತ್ತು ಬಂದಂತೆ ಬಹು ದೀರ್ಘಕಾಲ ನಿದ್ದೆ ಮಾಡಿದರೆ.. ......ಎಂಬ ಆಲೋಚನೆ ಹೊಳೆಯಿತು. ಆಗ ನಾನು ದೇವತೆಗಳಿಗೆ ಕೈಮುಗಿದು ನಿಶ್ಚಿಂತನಾಗಿ ಸುದೀರ್ಘಕಾಲ ನಿದ್ದೆ ಮಾಡುವಂತೆ ಅನುಗ್ರಹ ಮಾಡಬೇಕೆಂದು ಬಿನ್ನವಿಸಿಕೊಂಡೆ. ನಿದ್ದೆಯ ವರ ನನಗೆ ಸಿಕ್ಕಿತು!! ಯಾವುದೋ ಕಾಡಿನ ಯಾವುದೋ ಒಂದು ಗುಹೆಯಲ್ಲಿ ನಾನು ನಿದ್ದೆ ಮಾಡಲಾರಂಬಿಸಿದೆ ಬಹುಶಃ ಲೋಕದಲ್ಲಿ ನಿಶ್ಚಿಂತೆಯಿಂದ ದೀರ್ಘಕಾಲ ನಿದ್ದೆ ಮಾಡಿದವರಿಬ್ಬರೇ ಒಬ್ಬ ರಾಮಾಯಣದ ಕುಂಭಕರ್ಣ. ಇನ್ನೊಬ್ಬ ನಾನು!! ಇಬ್ಬರೂ ಅದನ್ನು ವರವಾಗಿ ಕೋರಿ ಪಡೆದವರು. ಕುಂಭಕರ್ಣನ ನಿದ್ದೆಯಿಂದ ಲೋಕ ಕಲ್ಯಾಣ" ನನ್ನ ನಿದ್ದೆಯಿಂದ ಆತ್ಮ ಕಲ್ಯಾಣ ಪರಮಾತ್ಮ ದರ್ಶನ

ನಿದ್ದೆಯಿಂದ ಆತ್ಮ ಕಲ್ಯಾಣ ಪರಮಾತ್ಮ ದರ್ಶನ ಹೇಗೆ ಸಾಧ್ಯವೆಂದು ನಿಮಗೆ ಸಂದೇಹ ಬರುವುದು ಸಹಜ. ಈಗ ಕೇಳಿ–ಅದು ಹೇಗೆ ಲಭ್ಯವಾಯ್ತೆಂದು ವಿವರವಾಗಿ ಹೇಳುತ್ತೇನೆ.

ನಂದ ಗೋಕುಲ ವಿಹಾರಿಯಾದ ಶ್ರೀಕೃಷ್ಣ ಕಂಸಾಸುರನನ್ನೂ ಧ್ವಂಸ ಮಾಡಿದ ಬಳಿಕ, ತನ್ನ ಅಳಿಯನನ್ನು ಕೊಂದ ಕೃಷ್ಣನ ಮೇಲೆ ಸೇಡು ತೀರಿಸಿ ಕೊಳ್ಳಬೇಕೆಂದು ಮಗಧ ಚಕ್ರೇಶ್ವರ ಜರಾಸಂಧ ಪ್ರಯತ್ನ ಮಾಡಿದ, ಮಧುರಾ ನಗರದ ಮೇಲೆ ದಂಡೆತ್ತಿ ಬಂದ ಹದಿನೇಳು ಸಲ ಆಕ್ರಮಣ ಮಾಡಿದ. ಆದರೇನು! ಶ್ರೀ ಕೃಷ್ಣನ ಅಪ್ರತಿಹತ ಪರಾಕ್ರಮದ ಮುಂದೆ ಜರಾಸಂಧ ಸೋಲಬೇಕಾಯ್ತು. ರೋಷ ಜ್ವಾಲೆ ಒಳಗೇ ಕುದಿಯುತ್ತಿತ್ತು ಅಷ್ಟರಲ್ಲಿ ಒಂದು ವಿಚಿತ್ರ ನಡೆಯಿತು. ದೇವರ್ಷಿ ನಾರದರು ಕಾಲಯವನನೆಂಬ ರಾಜನನ್ನು ಕೃಷ್ಣನ ಮೇಲೆ ಯುದ್ಧಕ್ಕಾಗಿ ಪ್ರೇರೇಪಿಸಿದರು.



ಕಾರದಿಂದ ಅಬ್ಬರಿಸಿದ ಆತನ ಆರ್ಭಟ ನೋಡಿ ನಾರದರು ಮನಸಿನಲ್ಲೇ ನಕ್ಕರು. ಮೂರು ಕೋಟಿ ಸೈನ್ಯದೊಡನೆ ಕಾಲಯವನ ಮಥುರೆಯ ಮೇಲೆ ದಿಗ್ವಿಜಯಕ್ಕಾಗಿ ಹೊರಟ ಅವನ ಜತೆಗೆ ಮಗಧ ಜರಾಸಂಧನೂ ಸೇರಿಕೊಂಡರೆ ಮಥುರಾನಗರ ನಾಶವಾಗುವುದು ಖಂಡಿತ. ಕುಲಬಾಂಧವರನ್ನು ಸಂರಕ್ಷಿಸುವುದಕ್ಕೆ ಕೃಷ್ಣನೊಂದು ಉಪಾಯ ಹುಡುಕಿದ.

ಸಮುದ್ರದ ನಡುವೆ ಹನ್ನೆರಡು ಯೋಜನ ಪ್ರದೇಶದಲ್ಲಿ ಒಂದು ಮಹಾನಗರವನ್ನೇ ತಯಾರಿಸಿದ

# ನಾನ್ಯಾರು?

ಎಷ್ಟು ಪರಾಕ್ರಮವಿದ್ದರೇನು? ಎಷ್ಟು ದಿಗ್ವಿಜಯ ಸಾಧಿಸಿದರೇನು? ಮಧುರೆಯ ಕೃಷ್ಣನನ್ನು ಸೋಲಿಸದಿದ್ದರೆ – ನಿನ್ನದಾವ ಪರಾಕ್ರಮ?– ಎಂದೆಲ್ಲ ಮೂದಲಿಸಿದರು. ಕೃಷ್ಣ ಯಾರು? ಆತನ ಯೋಗ್ಯತೆಯೇನು? ಸೈನ್ಯ ಬಲವೆಷ್ಟು? ಆತ ನೋಡಲು ಹೇಗಿದ್ದಾನೆ?–ಕಾಲಯವನ ನಾರದರನ್ನು ಕೇಳಿದ. ಆಗ ನಾರದರು ಕೃಷ್ಣನ ಗುರುತು ಹೇಳುತ್ತ–ಆತ ನೀಲಮೇಘಶ್ಯಾಮನಾಗಿದ್ದಾನೆ, ನಳಿನೇಕ್ಷಣನಾಗಿದ್ದಾನೆ, ಚಂದ್ರಬಿಂಬದಂತಹ ಆಕರ್ಷಣೀಯವಾದ ಮುದ್ದಾದ ಮುಖ, ಆಜಾನುಬಾಹು ಶ್ರೀವತ್ಸಲಾಂಛನ ಹೊಂದಿರುತ್ತಾನೆ. ಕೌಸ್ತುಭದ ಮಾಲೆ ಧರಿಸಿರುತ್ತಾನೆ ಪೀತಾಂಬರಧಾರಿಯಾಗಿರುತ್ತಾನೆ. ಆತನ ಮಕರ ಕುಂಡಲ ದೀಪ್ತಿಗೆ ಸೂರ್ಯ ಪ್ರಭೆಯೂ ಸರಿಸಾಟಿಯಲ್ಲ. ಪರಮ ಲಾವಣ್ಯ ಮೂರ್ತಿಯಾತ– ಎಂದರು

ಯಾದವರರಸ ಕೃಷ್ಣನನ್ನು ಕ್ಷಣಾರ್ಧದಲ್ಲಿ ಧ್ವಂಸ ಮಾಡುತ್ತೇನೆಂದು ಕಾಲಯವನ ಅಹಂ

---

**ವಿದ್ವಾನ್ ಬಿ. ನ. ಗುಂಡೂರಾವ್**

---

ಇದೇ ವಿಶ್ವಕರ್ಮ ನಿರ್ಮಿತವಾದ ದ್ವಾರಕಾನಗರ. ಕೃಷ್ಣನನ್ನು ಹಿಡಿದು ಧ್ವಂಸಮಾಡಲು ಕಾಲಯವನ ಸಮಯ ಕಾಯುತ್ತಿದ್ದ ಅದಕ್ಕೆ ತಕ್ಕಂತೆ ಒಂದು ದಿನ ಶ್ರೀಕೃಷ್ಣ ಕೈಯಲ್ಲಿ ಯಾವ ಆಯುಧವೂ ಇಲ್ಲದೆ ನಗರದಿಂದ ಹೊರಗೆ ಬಂದದನ್ನು ಗಮನಿಸಿದ ಕಾಲಯವನ, ಕೃಷ್ಣನನ್ನು ಬೆನ್ನಟ್ಟಿ ಹೊರಟ ಕೃಷ್ಣನ ಜತೆಯಲ್ಲಿ ಸೈನ್ಯವಿಲ್ಲ–ಯಾವ ಸಿಬ್ಬಂದಿಯೂ ಇಲ್ಲ. ಆತನನ್ನು ಸೆರೆಹಿಡಿಯಲು ಇದೇ ಸೂಕ್ತ ಸಮಯವೆಂದು ಭಾವಿಸಿದ ಕಾಲಯವನ ತುಂಬ ಸಂತೋಷಪಟ್ಟ, ದ್ವಾರಕಾನಗರವನ್ನೂ, ದ್ವಾರಕಾಧೀಶನನ್ನೂ ಧ್ವಂಸ ಮಾಡಲು ಸುಸಂದರ್ಭ ಸಿಕ್ಕಿತೆಂದು ಹಿಗ್ಗಿದ ಕಾಲಯವನ ಕೃಷ್ಣನನ್ನು ಯುದ್ಧಕ್ಕೆ ಆಹ್ವಾನಿಸಿದ ಬ್ರಹ್ಮಾದಿ ಸುರಸಂದೋಹವಂದಿತ ಚರಣಾರವಿಂದನಾದ ಸ್ವಾಮಿ ಈ ಖೂಳನ ಅಬ್ಬರ ಕೇಳಿ ಮನದಲ್ಲೇ ನಕ್ಕಿರಬೇಕು!!

ಕಾಲಯವನ, ಕೃಷ್ಣನನ್ನು ಆಪಾದಮೌಳಿ ಪರ್ಯಂತ ನೋಡಿದ. ನಾರದರು ಹೇಳಿದ್ದ ಗುರುತು– ಲಕ್ಷಣಗಳೆಲ್ಲ ಸರಿಯಾಗಿವೆಯೆಂದು ಖಚಿತ ಪಡಿಸಿಕೊಂಡ ಕಮಲಸಂಭವಾದಿಗಳಿಗೂ ಸಿಕ್ಕದ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5–30 | ಪ್ರಾ 7–00 |
| ತೋಮಾಲ ಸೇವೆ | ಪ್ರಾ 7–30 | ಪ್ರಾ 8–00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಅರ್ಚನ | ಪ್ರಾ 8–00 | ಪ್ರಾ 8–30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4–00) | | |
| ಸರ್ವದರ್ಶನ | ಪ್ರಾ 9–00 | ಮ 12–30 |
| | ರಾ 7–00 | ರಾ 8–45 |
| | ರಾ 9–00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5–30 ರಿಂದ ಪ್ರಾ 6–30 ರ ವರೆಗೆ ಮಾತ್ರ.

## ಅರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32–00 |
| 2. | ಚಂದ್ರಪ್ರಭ ವಾಹನ | 32–00 |
| 3. | ಗಜವಾಹನ | 32–00 |
| 4. | ಅಶ್ವವಾಹನ | 32–00 |
| 5. | ಸಿಂಹವಾಹನ | 32–00 |
| 6. | ಹಂಸವಾಹನ | 32–00 |
| 7. | ಚಿಕ್ಕಶೇಷವಾಹನ | 32–00 |
| 8. | ದೊಡ್ಡ ಶೇಷವಾಹನ | 62–00 |
| 9. | ಸೂರ್ಯಪ್ರಭವಾಹನ | 62–00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35–00 |
| 2. | ದಧ್ಯೋದನ | ,, | 40–00 |
| 3. | ಪುಳಿಯೋಗರೆ | , | 50–00 |
| 4. | ಪೊಂಗಲು | , | 55–00 |
| 5. | ಸಕ್ಕರಪೊಂಗಲ್ | ,, | 55–00 |
| 6. | ಶಾಕರ ಭಾತ್ | ,, | 85–00 |
| 7. | ಕೇಸರೀ ಭಾತ್ | ,, | 90–00 |
| 8. | ಸೀರ | , | 155–00 |

ವಿವರಗಳಿಗೆ:

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.


ಪರಾತ್ಪರ ವಸ್ತುವನ್ನು ಹಿಡಿಯ ಬಯಸಿದ ರೋಷ ಭೀಷಣನಾಗಿ – ಪ್ರಳಯಾಗ್ನಿ ಜ್ವಾಲೆಯಂತೆ– ಧಾವಿಸಿ ಬರುತ್ತಿದ್ದ ಯವನನನ್ನು ಕಂಡು–ಕೃಷ್ಣ ತಪ್ಪಿಸಿ ಕೊಳ್ಳಲು ಹವಣಿಸುವಂತೆ–ಓಡತೊಡಗಿದ. ಇದನ್ನು ಕಂಡು ಕಾಲಯವನನಿಗೆ ಹಾಸ್ಯವೆನಿಸಿತು. ತಾನೂ ಹಿಂಬಾಲಿಸಿ ಓಡಿದ, ಕೂಗಿ ಕರೆದ, ನಿಲ್ಲೆಂದು ಮೂದಲಿಸಿದ. 'ಕಂಸಾದಿಗಳನ್ನು ಧ್ವಂಸ ಮಾಡಿದ್ದರಿಂದ ನಿನ್ನ ಪ್ರರಾಕ್ರಮ ಹೆಚ್ಚೆಂದು ಮೂರ್ಖರಾದ ನಿನ್ನ ಭಕ್ತರು ಭಾವಿಸಬಹುದೇ ಹೊರತು ಲೋಕದಲ್ಲಿ ಇನ್ನಾರೂ ಹಾಗೆ ಭಾವಿಸಲಾರರು. ನನ್ನ ಬಹುಕಾಲದ ಬಯಕೆ ಈ ದಿನ ಈಡೇರಲಿದೆ. ಯದುವಂಶ ಶಿಖಾಮಣಿಯೆಂದು ಲೋಕ ಪ್ರಸಿದ್ಧ ಕೀರ್ತಿ ಪಡೆದಿರಬಹುದು ಆದರೆ ಈದಿನ ನಿನ್ನ ಸತ್ವ ಪರೀಕ್ಷೆಯ ಕಾಲ ಬಂದಿದೆ. ಈ ದಿನ ನೀನೆಲ್ಲೇ ಇರು, ಭುವನ ಬ್ರಹ್ಮಾಂಡವೆಲ್ಲ ಗಿರಗಿರ ಸುತ್ತಿದರು ಸಹ–ನಿನ್ನನ್ನು ಹಿಡಿದೇ ತೀರುತ್ತೇನೆ. ಈಗ ನಿನ್ನನ್ನು ರಕ್ಷಿಸುವರು ಬಹುಶಃ ಯಾವ ಲೋಕದಲ್ಲೂ ಇರಲಿಕ್ಕಿಲ್ಲ,' ಎಂದು ಮೂದಲಿಸಿ ಮಾತಾಡಿದ. ಕೃಷ್ಣ ಮುಂದೆ–ಕಾಲಯವನ ಹಿಂದೆ ಓಡಿದ್ದೇ ಓಡಿದ್ದು. ಹೀಗೇ ಹೋಗ ಹೋಗುತ್ತ ಕೃಷ್ಣ ಒಂದು ಗವಿಯೊಳ್ಳಕ್ಕೆ ಪ್ರವೇಶಿಸಿದ್ದನ್ನು ಕಂಡ ಯವನ, ಆ ಗವಿಗೆ ಬಿಟ್ಟ ಬಾಣದಂತೆ ನುಗ್ಗಿದ ಅಲ್ಲಿ ಅಂತರ್ಧಾನನಾದ ಕೃಷ್ಣ, ಜಗನ್ನಾಟಕ ಸೂತ್ರಧಾರಿ ಸಕಲ ಜೀವಿಗಳಿಗೂ ಆತನೇ ಅನ್ನದಾತ–ಹಿಂಬಾಲಿಸಿ ಬಂದ ಯವನ ಪಿಳಿಪಿಳಿ ನೋಡಿದ ಕೃಷ್ಣ ಎಲ್ಲೂ ಕಂಡು ಬರಲಿಲ್ಲ. ಆ ಕಗ್ಗತ್ತಲೆಯ ಏನೂ ಸ್ಪಷ್ಟವಾಗಿ ಕಾಣದು. ಬಹುದೂರ ಗವಿಯಲ್ಲೇ ನಡೆದು ಹೋದ ಯವನ ಅಲ್ಲೊಂದು ಕಡೆ ಯಾರೊ ಮಲಗಿರುವುದಾಗಿ ಗಮನಿಸಿದ–ಮಲಗಿದ್ದವನು ನಾನೆ!! ಆದರೆ ಮೂರ್ಖನಾದ ಕಾಲ ಯವನನಿಗೆ ವಾಸ್ತವಿಕವಿಚಾರ ತಿಳಿಯದು ಯುದ್ಧ ಮಾಡುವ ಯೋಗ್ಯತೆ ಇಲ್ಲದೆ–ಏನೊ ನಾಟಕ ಮಾಡುತ್ತ–ಈ ಗವಿಯಲ್ಲಿ ಬಂದು ಮಲಗಿದ್ದಾನೆ ಕೃಷ್ಣ–ಎಂದು ಭಾವಿಸಿ, ಆ ದುಷ್ಟ–ಶಾಂತವಾಗಿ ಮಲಗಿದ್ದ ನನ್ನನ್ನು ದುರಹಂಕಾರದಿಂದ ಒದ್ದು ಬಿಟ್ಟ ಅವನ ಆರ್ಭಟಕ್ಕೆ–ಅವನ ಪದಾಘಾತಕ್ಕೆ ಇಡೀ ಗವಿ ಪ್ರತಿನಿನಾದಿಸಿತು. ನನಗೆ ಕೂಡಲೇ ಎಚ್ಚರಿಕೆಯಾಯ್ತು ಇದೇನು ಗಲಭೆಯೆಂದು ಕಣ್‌ಬಿಟ್ಟು, ನೋಡಿದೆ. ಆಗೊಂದು ಅದ್ಭುತ ನಡೆಯಿತು. ನನ್ನ ಕಣ್ಣು ನೋಟಕ್ಕೆ ಕಾಲಯವನ ಧಗಧಗ ಉರಿದು ಬಿದ್ದ!! ಕ್ಷಣಾರ್ಧದಲ್ಲಿ ಹಿಡಿ ಬೂದಿಯಾಗಿ ಹೋದ!! ಇದೆಲ್ಲ ಏನೆಂದು ನೋಡುತ್ತಿರುವಷ್ಟರಲ್ಲಿ ಮತ್ತೊಂದಾಶ್ಚರ್ಯಕರವಾದ ಘಟನೆ ನಡೆಯಿತು. ಕಗ್ಗತ್ತಲೆಯಗವಿಯಲ್ಲಿ ಕೋಟಿ ಮಿಂಚು ಹೊಳೆದಂತೆ ಕಣ್ಣು ಕೋರೈಸುವ ಪ್ರಕಾಶವೊಂದುಂಟಾಯ್ತು. ಆ ಬೆಳಕು ಕ್ರಮೇಣ ಮಾನವಾಕೃತಿವಾಯ್ತು. ಯಾವುದೋ ಒಂದು ದಿವ್ಯ ಮಂಗಳಾಕಾರ ನನ್ನ ಮುಂದೆ ಪ್ರತ್ಯಕ್ಷವಾಯ್ತು. ಅದೇನು ಲಾವಣ್ಯ–ಅದೇನು ಕಮನೀಯತೆ–ಅದೇನು ಸೌಂದರ್ಯ!! ರಾಕೇಂದು ಸುಂದರಾಸ್ಯ–ಮಕರ ಕುಂಡಲಾಲಂಕೃತ – ಕೌಸ್ತುಭ ಮಣಿಮಾಲಾ ವಿರಾಜಿತ – ಶ್ರೀವತ್ಸಲಾಂಛನಾಂಚಿತ–ಆಜಾನುಬಾಹು–ಪೀತಾಂಬರಧಾರಿ – ಗಾಂಭೀರ್ಯ, ಸೌಶೀಲ್ಯ–ಸೌಂದರ್ಯ–ಸೌಜನ್ಯ–ಸೌಲಭ್ಯಗಳೆಲ್ಲವೂ ಮೂರ್ತೀಭವಿಸಿದಂತಿದ್ದ ಆ ಜಗನ್ಮೋಹನಾಕಾರನನ್ನು ಕಂಡು ನಾನು ಬೆರಗಾದೆ ಯಾರೀತನಿರಬಹುದು? ಇಂದ್ರನೇ–ಚಂದ್ರನೇ? ಅಗ್ನಿದೇವನೇ-ಭಾಸ್ಕರನೇ? ಈ ಭಯಾನಕ ಪ್ರದೇಶಕ್ಕೆ ಈ ಮಂಗಳಮೂರ್ತಿ ಬಿಜಯ ಮಾಡಿಸಿದ್ದೇಕೆ? ನನಗೊಂದೂ ಬಗೆ ಹರಿಯಲಿಲ್ಲ. ಧೈರ್ಯಮಾಡಿ ಆತನನ್ನೇ ಕೇಳಿದೆ. ಆಗ ಆತನ ಮುದ್ದು ಮುಖದ ಮೇಲೆ ಮೂಡಿದ ಮುಗುಳ್ನಗೆಯ ಸೊಬಗನ್ನು ನೋಡಲು ಎರಡು ಕಣ್ಣು ಸಾಲದಾಗಿತ್ತು.

"ಮುಚುಕುಂದ, ನಾನಾರು ಗೊತ್ತೇ? ಸನಕಾದಿ ಯೋಗಿಗಳ ತಪಃಫಲ. ಸಿರಿದೇವಿ ಲಕ್ಷ್ಮಿಯ ಬಾಳಿನ ಭಾಗ್ಯ: ಗೋಪ ಕನ್ಯೆಯರ ಪುಣ್ಯಫಲ–ನಂದ ಯಶೋದೆಯರ ಕಣ್ಮಣಿ- ವಸುದೇವ ದೇವಕಿಯರ ಪುತ್ರನಾಗವತರಿಸಿದ ಪರಾತ್ಪರವಸ್ತು–ಧರ್ಮ ಸಂಸ್ಥಾಪಕ–ದುಷ್ಟಜನ ಶಿಕ್ಷಕ–ಶಿಷ್ಟ ಸಂರಕ್ಷಕ......"ಎಂದು ಆತ ತನ್ನ ಪರಿಚಯ ನೀಡಿದಾಗ ನನ್ನ ಆನಂದಕ್ಕೆ ಪಾರವಿರಲಿಲ್ಲ. ಸ್ವಾಮಿ ತಾನಾಗಿ-ಕೃಪೆಮಾಡಿ–ನಾನಿದ್ದ ಗವಿಗೆ ಬಂದಿದ್ದ. ಲೋಕ ಮೋಹಕ ವೇಣುಗಾನಲೋಲನ ಚರಣಾರವಿಂದಗಳಲ್ಲಿ ದಿಂಡುರುಳಿಬಿದ್ದೆ. ನನ್ನಮೈ ಪುಲಕಿತವಾಯ್ತು – ಸ್ವಾಮಿಪಾದಸ್ಪರ್ಶದಿಂದ ಕೃಪಾವಾರಿಧಿಯೆನ್ನುವುದೇ? ವಾತ್ಸಲ್ಯ ಜಲಧಿಯೆನ್ನುವುದೇ? ಈತನನ್ನೇನೆಂದು ಕೊಂಡಾಡಬೇಕೆಂದು ನನಗೆ ತೋಚದೆ ಹೋಯ್ತು. ನನಗೆ ಹೊಳೆದ ಮಾತುಗಳಿಂದ ಆ ಪುಣ್ಯಮೂರ್ತಿಯನ್ನು ಕೊಂಡಾಡಿದೆ ಆ ಕೃಪಾಮೂರ್ತಿ ನನ್ನ ಒರಟು ಮಾತುಗಳಿಂದಲೇ ಸಂತುಷ್ಟನಾದ

ನಾನು ಕಗ್ಗತ್ತಲೆಯ ಗವಿಯಲ್ಲಿ ಬಿದ್ದಿದ್ದದ್ದು ಒಳ್ಳೆಯದೇ ಆಯ್ತೆಂದು ಭಾವಿಸಿದೆ. ನನ್ನ ಹೃದಯವೇ ಕಗ್ಗತ್ತಲೆಯ ಗವಿಯಾಗಿರಬಾರದೇಕೆ? ಸುಟ್ಟು ಹೋದ ಆ ಕಾಲಯವನನೇ ನನ್ನ ಅಜ್ಞಾನವಾಗಿರಬಾದೇಕೆ! ಕತ್ತಲೆ ನಾಶವಾದ ಮೇಲೆ ತಾನೆ ದಿವ್ಯಜ್ಯೋತಿಯ ಭವ್ಯದರ್ಶನ? ನಾನು ಆ ಭವ್ಯತೆಯನ್ನು ಕಣ್ಣಾರೆ ಕಂಡು ಧನ್ಯನಾದೆ–ಆ ವಾತ್ಸಲ್ಯ ವಾರಿಧಿಲ್ಲಿ ಕರಗಿ ಹೋದೆ.

ಈ ನನ್ನ ಕಥೆ–ನನ್ನ ಅನುಭವ–ನಿಮಗೆ ಬೇಸರವಾಗಲಿಲ್ಲವಷ್ಟೆ!!

---

(8 ನೇ ಪುಟದಿಂದ)

ಅರಿವು ಮೂಡಿಸಲು ಶಕ್ತ ಮಾಧ್ಯಮನಾಗಿರುವ ಈ ಅಭಂಗಗಳ ಮುಖ್ಯ ಧ್ಯೇಯ ಭಗವನ್ನಾಮ ಸ್ಮರಣೆ ಅಭಂಗಗಳ ಕೊನೆಯಲ್ಲಿ ರಚನಾಕಾರನ ಅಂಕಿತ(ಮುದ್ರಿಕಾ) ಇರುತ್ತದೆ ಉದಾಹರಣೆಗೆ ಬಾಪ –ರುಖುಮಾದೇವಿವರ (ಜ್ಞಾನದೇವನದು)

ಭಗವದ್ಗೀತೆಯ ಆಧಾರದಿಂದ ಜ್ಞಾನದೇವನು 'ಭಕ್ತಿಯಿಂದ ಸರ್ವರಿಗೂ ಮುಕ್ತಿ ಲಭಿಸುವುದು' ಎಂಬುದಾಗಿ ಸಾರಿದ. ಭಗವಂತನ ದೃಷ್ಟಿಯಲ್ಲಿ ಸರ್ವರೂ ಸಮಾನರು ಎಂಬ ವಿಚಾರವನ್ನು ಮನ ದಟ್ಟು ಮಾಡಿಕೊಟ್ಟ ಅವನ ಮಾನವಪ್ರೇಮವನ್ನು ವಿಶ್ವಮಾನವ ಪ್ರಜ್ಞೆಯನ್ನೂ ತಿಳಿಸುವ ಭವ್ಯ ಸಾಲುಗಳಿವು:

ಸಮಸ್ತ ಲೋಕಕೂ ಒಡೆಯನಾದ ಭಗವಂತನು
ನನ್ನ ಸಾಹಿತ್ಯಕ ಸೇವೆಯಿಂದ
ಸಂತೃಪ್ತನಾಗಲಿ
ಸಂತೃಪ್ತನಾಗಿ ನನಗೆ ಈ ಕೃಪೆಯನ್ನು
ಕರುಣಿಸಲಿ
ದುಷ್ಟರು ತಮ್ಮ ದುಷ್ಟತನ ಬಿಡುವಂತಾಗಲಿ,
ಪ್ರೇಮದ ಅಭಿವೃದ್ಧಿಯಾಗಲಿ
ಎಲ್ಲರನ್ನು ವಿಶ್ವಪ್ರೇಮವೇ ತಳೆಲಿ
ಪಾಪದ ಕತ್ತಲೆ ಕಳೆಯಲಿ
ಸತ್ಯಧರ್ಮದ ಸೂರ್ಯ ಪ್ರಪಂಚವನ್ನು
ಬೆಳಗಲಿ
ಎಲ್ಲರ ಆಶೆ ಆಕಾಂಕ್ಷೆಗಳು ಈಡೇರಲಿ
ಭಗವಂತನ ಭಕ್ತ ಸಮೂಹದ ಕೃಪಾಕಟಾಕ್ಷವು
ಪ್ರಪಂಚದ ಎಲ್ಲರಿಗೂ ಲಭಿಸಲಿ
ಪ್ರಪಂಚದ ಜನರೆಂದರೆ,
ಚಲಿಸುವ ಆಶಾವೃಕ್ಷಗಳು
ಜೀವಂತ ಆಶಾರತ್ನ ಖನಿಜಗಳು
ಮಾತನಾಡುವ ಅಮೃತ ಸಮುದ್ರಗಳು
ಅವರು ಕಲಂಕರಹಿತ ಚಂದಿರರು
ಅಥವಾ ಉಷ್ಣತೆಯಿಂದ ದೈಹಿಕಯಾತನೆ
ನೀಡದ ಸೂರ್ಯರು
ಸಕಲ ಜೀವಿಗಳಿಗೂ ಸಕಲ ಸುಖಸಂತೋಷ
ಲಭಿಸಲಿ
ಪೂರ್ವಜರ ನಿರಂತರ ಭಕ್ತಿ ಅವರಲ್ಲಿ
ಅವತರಿಸಲಿ
ಭಗವಂತ ಉತ್ತರಿಸಿದ, ತಥಾಸ್ತು!
ನೀನು ಕೋರಿದ್ದೆಲ್ಲವೂ ನಡೆಯಲಿದೆ
ಈ ಭಗವದ್‌ವಾಕ್ಯವನ್ನಾಲಿಸಿದ ಜ್ಞಾನದೇವ
ಸಂತೋಷಗೊಂಡ.

– (ಜ್ಞಾನೇಶ್ವರೀ 18.1772–80, ಪು 682)

ಜ್ಞಾನದೇವನಿಂದ ಮರಾಠೀ ಭಾಷೆಯಲ್ಲಿ ಆಧ್ಯಾತ್ಮಿಕತೆ ತಲೆ ಎತ್ತಿತು, ತಳ ಊರಿತು. ತಾತ್ತ್ವಿಕವಾಗಿಯೂ, ಸಾಹಿತ್ಯಕವಾಗಿಯೂ ಮಹೋನ್ನತಿ ಗಳಿಸಿದ ಈತ ಮರಾಠೀ ಭಕ್ತಿಪಂಥದ ಹಾಗೂ ಸಾಹಿತ್ಯದ ಒಂದು ಅನರ್ಘ್ಯ ರತ್ನ, ದಿವ್ಯ ಮಾನವ. ಅವನ ಜೀವನದಿಂದ, ಕೃತಿಗಳಿಂದ ಪ್ರೇರಣೆಗೊಂಡ ಅವನ ಮಾರ್ಗವಲ್ಲಿಯೇ ನಡೆದ ವರು ಹಲವಾರು ಮಂದಿ ಅವರ ಪೈಕಿ ನಾಮ ದೇವ, ಗೋರಾ ಪ್ರಮುಖರು, ಪ್ರಸಿದ್ಧರಾದವರು.




# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು,

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( 2 ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ ( ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ )

ಬಸ್ ಹೊರಡುವ ಕಾಲ : ಬೆಳಗ್ಗೆ 6–30, ಬೆಳಗ್ಗೆ 10–30, ಸಂಜೆ 4–30

ಬಸ್ ಪ್ರಯಾಣದ ದರ , ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್
( ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ. )

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

# ಭಕ್ತ ಕವಿ ಎಳುತ್ತಚ್ಛನ್

16ನೆಯ ಶತಮಾನ ಭಾರತದ ಭಕ್ತಿ ಚಳುವಳಿಯಲ್ಲಿ ವಿಶಿಷ್ಟವಾದ ಕಾಲ. ಜಾತಿ ವ್ಯವಸ್ಥೆಯಿಂದ ಜನ ಬೇಸತ್ತು ಮತಾಂತರ ಹೊಂದುತ್ತಿದ್ದ ಕಾಲ. ಹೀಗೆ ಮಾನಸಿಕವಾಗಿ ಕಂಗೆಟ್ಟಿದ್ದ ಜನರನ್ನು ಒಂದುಗೂಡಿಸಲು ಭಕ್ತಿ ಚಳುವಳಿ ಪ್ರಾರಂಭವಾಯಿತು. ಇಂತಹ ಕಾಲದಲ್ಲೇ ಕೇರಳದಲ್ಲಿ ಭಕ್ತಕವಿ ಎಳುತ್ತಚ್ಛನ್ ತನ್ನ ಕೃತಿಗಳಿಂದ ಜನರಲ್ಲಿ ಜಾಗೃತಿ ಮಾಡಿಸಲು ಮುಂದಾದ.

ವಿದೇಶೀಯರಾದ ಅರಬರು ಪೋರ್ಚುಗೀಸರು ವ್ಯಾಪಾರಕ್ಕಾಗಿ 16ನೆಯ ಶತಮಾನದ ಉತ್ತರಾರ್ಧದಲ್ಲಿ ಕೇರಳಕ್ಕೆ ಬಂದರು. ಆಗ ಕೇರಳ ಚಿಕ್ಕ ಪುಟ್ಟ ರಾಜ್ಯಗಳಾಗಿ ಒಡೆದು ಛಿದ್ರವಾಗಿತ್ತು. ಅಲ್ಲಿಯ ರಾಜರು ಪರಸ್ಪರ ಅಂತಃಕಲಹಗಳಲ್ಲಿ ನಿರತರಾಗಿದ್ದರು, ವ್ಯಾಪಾರಕ್ಕಾಗಿ ಬಂದ ವಿದೇಶೀಯರು ಇವರ ಅಂತಃಕಲಹಗಳನ್ನು ಹೆಚ್ಚಿಸಲು ಕಾರಣರಾದರು. ಜನರ ಜೀವನಕ್ರಮ ಉಲ್ಲೋಲ ಕಲ್ಲೋಲವಾಗಿತ್ತು ಇಂತಹ ಕಾಲದಲ್ಲಿ ಎಳುತ್ತಚ್ಛನ್ ಹುಟ್ಟಿದ.

ಈತ ಪೊನ್ನಾನಿ ತಾಲ್ಲೂಕಿನ ತಿರೂರಿಗೆ ಹತ್ತಿರದಲ್ಲಿದ್ದ ತುಂಜನ್ಪರಂಬು ಎಂಬ ಊರಿನಲ್ಲಿ 16ನೆಯ ಶತಮಾನದ ಉತ್ತರಾರ್ಧದಲ್ಲಿ ಜನಿಸಿದ. ತಂದೆ ಒಬ್ಬ ನಂಬೂದಿರಿ, ತಾಯಿ ನಾಯರ್ ಹೆಣ್ಣು. ಈತ ತನ್ನ ಕೃತಿಗಳಲ್ಲಿ ಎಲ್ಲಿಯೂ ತನ್ನ ವೈಯಕ್ತಿಕ ವಿಚಾರಗಳನ್ನು ಹೇಳಿಲ್ಲ: ಈತನ ಪೂರ್ವಾಶ್ರಮದ ಹೆಸರನ್ನು ಶಂಕರ ಅಥವಾ ರಾಮ ಎಂದು ಊಹಿಸಲಾಗಿದೆ. ಈತನ ಪೂರ್ಣಹೆಸರು ತುಂಜತ್ತು ರಾಮಾನುಜನ್ ಎಳುತ್ತಚ್ಛನ್ ತುಂಜತ್ತು ಎಂಬುದು ಮನೆತನದ ಹೆಸರು. ಎಳುತ್ತಚ್ಛನ್ ಎಂದರೆ ಅಕ್ಷರಗಳನ್ನು ಕಲಿಸುವಾತ (ಎಳುತ್ತು-ಅಕ್ಷರ, ಅಚ್ಛನ್ ಆಚಾರ್ಯ. ಗುರು )ಎಂದರ್ಥ. ಗುರು ಮರವೊಂದರಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದನಂತೆ. ಈತನಿಗೆ ತಮಿಳು ಮತ್ತು ಸಂಸ್ಕೃತಗಳಲ್ಲಿ ವಿದ್ಯಾಭ್ಯಾಸ ನಡೆಯಿತಂತೆ. ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯಗಳಿಸಿದ್ದರಿಂದಲೇ ಮಲಯಾಳಭಾಷೆಗೆ,ಒಂದುಹೊಸ ಆಯಾಮ ಕಲ್ಪಿಸಿದ. ಎಳುತ್ತಚ್ಛನ್ 'ಹರಿನಾಮಕೀರ್ತನಂ, 'ರಾಮಾಯಣಂ ಇರುಪತ್ತಿನಾಲು ವೃತ್ತಂ, 'ಅಧ್ಯಾತ್ಮರಾಮಾಯಣ ಕಿಳಿಪಾಟ್ಟು, 'ಮಹಾಭಾರತ ಕಿಳಿಪಾಟ್ಟು, 'ಭಾಗವತ' ಮತ್ತು 'ಚಿಂತಾರತ್ನ' ಎಂಬ ಕೃತಿಗಳನ್ನು ರಚಿಸಿದ್ದಾನೆ.

## ಹರಿನಾಮಕೀರ್ತನಂ

ಇದು ಈತನ ಮೊಟ್ಟಮೊದಲ ಕೃತಿ. ಈ ಕೃತಿಯಲ್ಲಿ ಅಕ್ಷರಮಾಲೆಯ ಅಕ್ಷರಗಳನ್ನು ಒಂದೊಂದು ಪದ್ಯದಲ್ಲೂ ಕ್ರಮವಾಗಿ ಬಳಸಿದ್ದಾನೆ. ಮೊದಲು ಮತ್ತು ಕಡೆಯಲ್ಲಿ ನಮಸ್ಕಾರವಾಕ್ಯವಿರುವ ಕೀರ್ತನೆಗಳಿವೆ- ಈತ ವಿದ್ಯಾಗುರುವಾದ್ದರಿಂದ ಅಕ್ಷರಗಳನ್ನು ಕಲಿಸಲು, ಭಕ್ತರು ಪಾರಾಯಣ ಮಾಡಲು ಈ ಕೃತಿಯನ್ನು ರಚಿಸಿದಂತೆ ಕಾಣುತ್ತದೆ.

## ರಾಮಾಯಣ ಇರುಪತ್ತಿನಾಲುವೃತ್ತಂ

ಇತರ ಪ್ರತಿಯೊಂದು ಪದ್ಯವೂ 'ಹರಿನಾರಾಯಣ ನಮಃ ಹರಿಗೋವಿಂದ' ಎಂಬುದರಿಂದ ಕೊನೆಗೊಳ್ಳುತ್ತದೆ. ರಾಮಾಯಣದ ಮುಖ್ಯ ಘಟನೆಗಳನ್ನು 24 ವೃತ್ತಗಳಲ್ಲಿ ಹೇಳಿದ್ದರೂ ಹರಿಯ ಕೀರ್ತನೆಯೇ ಇಲ್ಲಿ ಪ್ರಧಾನವಾಗಿದೆ.

## ಅಧ್ಯಾತ್ಮ ರಾಮಾಯಣ ಕಿಳಿಪಾಟ್ಟು

ಎಳುತ್ತಚ್ಛನ್ ಬ್ರಹ್ಮಾಂಡ ಪುರಾಣದ ಒಂದು ಭಾಗವಾದ ಅಧ್ಯಾತ್ಮ ರಾಮಾಯಣವನ್ನು ಮೊಟ್ಟಮೊದಲು ಮಲಯಾಳಕ್ಕೆ ತಂದ. ಎಲ್ಲರೂ ವಾಲ್ಮೀಕಿರಾಮಾಯಣವನ್ನು ಮೂಲವಾಗಿಟ್ಟುಕೊಂಡರೆ ಈತ ಅಧ್ಯಾತ್ಮ ರಾಮಾಯಣವನ್ನೇ ಆಯ್ದುಕೊಳ್ಳಲು ಕಾರಣ ಅಂದಿನ ಸಾಮಾಜಿಕ ಸ್ಥಿತಿ ಏಕೆಂದರೆ ದಿಕ್ಕೆಟ್ಟು ಕಂಗಾಲಾಗಿದ್ದ ಜನರನ್ನು ಭಕ್ತಿಮಾರ್ಗದತ್ತ ಕೊಂಡೊಯ್ಯಬೇಕಾದದ್ದೇ ಈತನ ಪ್ರಧಾನ ಗುರಿಯಾಗಿದ್ದದ್ದರಿಂದ ಭಕ್ತಿಯನ್ನೇ ಪ್ರಧಾನಭಾವವಾಗಿ ಈ ಕೃತಿಯಲ್ಲಿ ತಂದಿದ್ದಾನೆ. ವಾಲ್ಮೀಕಿಯು ರಾಮನನ್ನು ಕೇವಲ ಅದರ್ಶ ವ್ಯಕ್ತಿಯಾಗಿ ಚಿತ್ರಿಸಿದರೆ ಈತ ಅವನನ್ನು (ರಾಮ)ವಿಷ್ಣುವಿನ ಅವತಾರವೆಂದು ದೈವತ್ವಕ್ಕೇರಿಸಿದ್ದಾನೆ.

ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ ಮತ್ತು ಉತ್ತರಕಾಂಡ ಎಂಬ ಆರುಕಾಂಡಗಳಲ್ಲಿ 2986 ಶ್ಲೋಕಗಳಲ್ಲಿ ಈ ಕೃತಿ ಮೂಡಿ ಬಂದಿದೆ.

ರಾವಣವಧೆಯೇ ರಾಮನ ಜನನದ ಗುರಿ. ಇಲ್ಲಿ ರಾವಣ ಒಯ್ಯುವುದು ಮಾಯಾಸೀತೆಯನ್ನು, ನಿಜವಾದ ಸೀತೆಯನ್ನಲ್ಲ. ರಾವಣ ರಾಮನಿಂದ ಮಾಡಿದರೂ ಅದು ಪರೋಕ್ಷವಾಗಿ ರಾಮನ ಸ್ತುತಿಯೇ! ಮೋಕ್ಷಸಾಧನೆಗಾಗಿಯೇ ರಾವಣ ಸೀತೆಯನ್ನು ಅಪಹರಿಸಿದನಂತೆ! ರಾಮನನ್ನು ಎಲ್ಲೆಲ್ಲಿ ಸ್ತುತಿಸ

ಕುಮಾರಿ ಎ. ಎಂ. ದೇವಿ

ಬೇಕೋ ಅಲ್ಲೆಲ್ಲ ರಾಮನ ಗುಣಗಳನ್ನೇ ಹೇಳುತ್ತಾ ಕವಿ ಭಕ್ತಿ ಪರವಶನಾಗುತ್ತಾನೆ. ಉದಾ–

ಸುಂದರಂ ರಾಮಚಂದಿರಂ ಪರಮಾನಂದ
ಮಂದಿರಂ ಇಂದ್ರಾದಿ ವೃಂದಾರಕವೃಂದ
ವಂದಿತಂ ಇಂದಿರಾ ಮಂದಿರೋರುಸ್ಥಲಂ
ಇಂದ್ರವರಜಂ ಇಂದೀವರಲೋಚನಂ

ಅ.ಕಾಂ

ಜೀವನ ನಶ್ವರವೆಂದೂ, ಮೃತ್ಯು ಅನಿವಾರ್ಯವೆಂದೂ, ಸುಖ ದುಃಖಗಳು ಒಂದೇ ನಾಣ್ಯದ ಎರಡು ಮುಖಗಳೆಂದೂ ಜನರು ತಮ್ಮನ್ನು ತಾವು ಸಂತೈಸಿಕೊಳ್ಳುವಂತೆ ಈ ಕವಿ ಬೋಧನೆ ಮಾಡಿದ್ದಾನೆ. ಪಿತೃ, ಮಾತೃ, ಭಾತೃ ಭಕ್ತಿಯನ್ನು ರಾಮನ ಜೀವನದ ನಿರೂಪಣೆಯ ಮೂಲಕ ತಿಳಿಸಿ ಹೇಳಿದ್ದಾನೆ

ಅಧ್ಯಾತ್ಮ ರಾಮಾಯಣ ಸಂಸ್ಕೃತ ಕಾವ್ಯದ ರೂಪಾಂತರವಾದವರೂ ಸ್ವತಂತ್ರ ಕೃತಿಯೇನೋ ಎನ್ನುವಂತೆ ಭಾಸವಾಗುತ್ತದೆ. ಮೂಲಕೃತಿಯನ್ನೇ ಯಥಾವತ್ತಾಗಿ ಅನುಸರಿಸಿದರೂ ಉಚಿತವಾದೆಡೆಗಳಲ್ಲಿ ಸ್ವಾತಂತ್ರ್ಯವಹಿಸಿದ್ದಾನೆ. ಶ್ರೀರಾಮನ ಬಾಲಕಾಲದ ವರ್ಣನೆ, ಪರಶುರಾಮನೊಡನೆ ಯುದ್ಧ, ಶೂರ್ಪನಖಿ ಪ್ರಸಂಗ, ವಾಲಿವಧೆ ಲಂಕಾದಹನ, ರಾವಣಯುದ್ಧ ಮುಂತಾದ ಕಡೆಗಳಲ್ಲಿ ಮೂಲವನ್ನು ಅನುಸರಿಸುವುದರ ಜೊತೆಗೆ ಸಂದರ್ಭೋಚಿತವಾಗಿ ಮತ್ತು ಪಾತ್ರಗಳ ರಚನೆಯಲ್ಲಿ ವಿದಗ್ಧತೆಯನ್ನು ತೋರಿದ್ದಾನೆ.

ಎಳುತ್ತಚ್ಛನ್ ಈ ಕೃತಿಯನ್ನು ಕಿಳಿಪಾಟ್ಟು ಎಂಬ ಹೊಸಶೈಲಿಯಲ್ಲಿ ರಚಿಸಿದ್ದಾನೆ. ಏಕೆಂದರೆ ಸಮಾಜದ ನಿಮ್ನವರ್ಗದ ಜನ ನೇರವಾಗಿ ಆಧ್ಯಾತ್ಮಿಕ ವಿಚಾರವನ್ನು ಕೇಳಬಾರದೆಂಬ ಒಂದು ಸಂಪ್ರದಾಯ ಅಂದು ಇತ್ತು. ಆದುದರಿಂದ ಒಂದು ಕಾಲ್ಪನಿಕ ಪಕ್ಷಿಯ ಮೂಲಕ ಅಪ್ರತ್ಯಕ್ಷವಾಗಿ ಕಥಾನಿರೂಪಣೆ ಮಾಡಿದ. ಆ ಗಿಳಿ ಶುಕಮಹರ್ಷಿಯ ಸಂಕೇತವೆಂದೂ, ಸರಸ್ವತಿಯ ಕೈಯಲ್ಲಿರುವ ಪಕ್ಷಿಯೆಂದೂ ಹೇಳುತ್ತಾರೆ. ವಿಶ್ರಾಂತಿಗೆಂದು ಮಧ್ಯೆ ಮಧ್ಯೆ ಗಿಳಿಗೆ ಆಹಾರ ಕೊಟ್ಟು ಕಥೆ ಮುಂದುವರಿಸುತ್ತಾನೆ. 'ಓ ಪ್ರೀತಿಯ ಗಿಳಿಯೇ ರಾಮನ ಕಥೆಯನ್ನು ನಮಗೆಲ್ಲಾ ಹೇಳು ಬಾ ಎಂದು ಕಥೆಯನ್ನು ಆರಂಭಿಸುತ್ತಾನೆ.

## ಮಹಾಭಾರತ ಕಿಳಿಪಾಟ್ಟು

ಈ ಕೃತಿಯನ್ನೂ ಕಿಳಿಪಾಟ್ಟು ಶೈಲಿಯಲ್ಲೇ ರಚಿಸಿದ್ದಾನೆ ವ್ಯಾಸಭಾರತವನ್ನೇ ಅನುಸರಿಸಿ ಕಥೆಯನ್ನು ನೇರವಾಗಿ ಹೇಳಿದ್ದಾನೆ.

ರಾಮಾಯಣಕ್ಕಿಂತಲೂ ಭಾರತ ಈತನ ಉತ್ಕೃಷ್ಟ ಕೃತಿ. ಕೇರಳದ ಅಂದಿನ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿಗೆ ಮಹಾಭಾರತದ ಭಾಷಾಂತರ ಅತ್ಯಗತ್ಯವಾಗಿತ್ತು ಸಮುದ್ರದಷ್ಟು ವಿಶಾಲವಾದ ಮೂಲ ವ್ಯಾಸಭಾರತವನ್ನು ಸಂಗ್ರಹ ಗೊಳಿಸಿದ್ದಾನೆ.

ಈ ಕವಿ ಪಾಂಡವರ ಕಥೆಯನ್ನು ಹೇಳುತ್ತಿದ್ದರೂ ಕೃಷ್ಣನಿಗೇ ಹೆಚ್ಚು ಪ್ರಾಧಾನ್ಯ ನೀಡಿದ್ದಾನೆ. ಚೇರುಶ್ಶೇರಿ ಕೃಷ್ಣನನ್ನು ಶೃಂಗಾರನಾಯಕನಾಗಿ ಚಿತ್ರಿಸಿದ್ದರೆ ಎಳುತ್ತಚ್ಛನ್ ಗಂಭೀರ ವ್ಯಕ್ತಿಯಾಗಿ ಚಿತ್ರಿಸಿದ್ದಾನೆ. ಕೃಷ್ಣನ ಬಾಲಲೀಲೆಯ ವರ್ಣನೆಯನ್ನು ಬಿಟ್ಟು ಕುರುಕ್ಷೇತ್ರಯುದ್ಧದಲ್ಲಿ ಪಾರ್ಥಸಾರಥಿಯಾಗಿ ಗೀತೋಪದೇಶ ಮಾಡುವ ಗಂಭೀರ ಗುಣಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾನೆ ಎಳುತ್ತಚ್ಛನ್. ಯುದ್ಧ ವರ್ಣನೆಯಲ್ಲಿ ಈತ ಬಹಳನಿಪುಣ. ಭೀಮ ದುಶ್ಶಾಸನನನ್ನು ವಧಿಸುವ ಒಂದು ರೌದ್ರ ರಸದವರ್ಣನೆ ಯನ್ನು ನೋಡೋಣ

"ಭೀಮ, ದುಶ್ಶಾಸನನ ಕಾಲುಗಳನ್ನು ಹಿಡಿದು ಕೆಡಹಿ ತುಳಿದು ಅವನ ಮೇಲೆ ಹತ್ತಿ ಕುಳಿತು, ಅಸಂಖ್ಯಾತ ದೇವತೆಗಳೂ ಮನುಷ್ಯರೂ ನೋಡುತ್ತಿದಂತೆಯೇ ತನ್ನ ಖಡ್ಗವನ್ನೆತ್ತಿ ಆತನ ಎದೆಯನ್ನು ಸೀಳಿ ತನ್ನ ನಖಗಳಿಂದ ಅವನ ಎದೆಯ ಮೂಳೆಯನ್ನು ಪುಡಿ ಮಾಡಿದಾಗ ಪ್ರವಾಹದಂತೆ ಹರಿಯುತ್ತಿದ್ದ ಕೆನ್ನೆತ್ತರನ್ನೆಲ್ಲ ಗರ್ಜಿಸುತ್ತ ಆಕಂಠ ಪ್ರಮಾಣ ಕುಡಿದು, ಕರುಳುಗಳನ್ನು ಬಗೆದು ಹಾರವನ್ನಾಗಿ ಹಾಕಿಕೊಂಡು, ಭೂಮಿಯು ನಡುಗುವಂತೆ ಕುಣಿಕುಣಿದು ಧೂಳನ್ನೆಬ್ಬಿಸಿ ಆಕಾಶವೆಲ್ಲ ಆ ಧೂಳಿನಿಂದ ಮುಸುಕುವಂತೆ ಮಾಡಿದ."

ಯುದ್ಧದಲ್ಲಿ ಸತ್ತು ಬಿದ್ದಿದ್ದ ಶರೀರಗಳನ್ನು ನೋಡುತ್ತ ದುರ್ಯೋಧನನ ಶರೀರವನ್ನು ನೋಡಿ ಗಾಂಧಾರಿ ಚಿತ್ತಕ್ಷೋಭೆಗೊಂಡು ಪ್ರಲಾಪಿಸುವ ರೀತಿ ಮನಕಲಕುತ್ತದೆ.

"ಹಂಸತೂಲಿಕಾತಲ್ಪದಲ್ಲಿ ಪವಡಿಸುವ ನಿನಗೆ ಈ ಕಲ್ಲು ನೆಲದಲ್ಲಿ ಭೀಮನ ಭೀಷಣವಾದ ಗದಾಘಾತದಿಂದ ತೊಡೆಗಳನ್ನು ಮುರಿಸಿಕೊಂಡು ಬಿದ್ದಿರಬೇಕಾದ ಸ್ಥಿತಿ ಬಂತೇ! ದೇವಾ ನಾನಿದನ್ನು ಸಹಿಸಲಾರೆ" ಎಂದು ಗೋಳಾಡುತ್ತ ಓಡೋಡಿ ಧೂಳಿನಲ್ಲಿ ಹೊರಳಿ ಮೂರ್ಛಿತಳಾದಳು.

ಭಾವನಾತ್ಮಕ ಸನ್ನಿವೇಶದಲ್ಲಿ ಭಾಷೆ ಲಾಲಿತ್ಯಗೊಂಡು ಹೃದಯಂಗಮಿಯಾಗಿ ಹರಿಯುತ್ತದೆ. ಕಣ್ವಾಶ್ರಮದಲ್ಲಿ ಶಕುಂತಲೆಯನ್ನು ಬೀಳ್ಕೊಡುವ ದೃಶ್ಯ ಈ ಮುಂದಿನಂತಿದೆ.

"ತಂದೆಯನ್ನು ಅಗಲಬೇಕಾದ ದುಃಖದಿಂದ ಶಕುಂತಲೆ ಕಣ್ಣೀರಿಡುತ್ತಿದ್ದಳು. ಕಣ್ಣೀರಿನ ಹನಿಗಳು ಅವಳ ಕುಚಗಳ ಮೇಲೆತೊಟ್ಟಿಕ್ಕುತ್ತಿದ್ದವು; ಮುನಿಪುಂಗವನಿಗೆ ತನ್ನ ಮಗನೊಂದಿಗೆ ನಮಸ್ಕರಿಸುತ್ತಾ ಗದ್ಗದಕಂಠಳಾಗಿ ಪ್ರದಕ್ಷಿಣೆ ಬಂದಳು. ಆಗ ಆ ಮುನಿಗಳು ಅವಳ ಮಗನನ್ನು ತೊಡೆಯಮೇಲೆ ಕೂರಿಸಿಕೊಂಡು ಅವನನ್ನು ಮುದ್ದಿಸುತ್ತ–ಭೂಮಿಪಾಲಕನಾಗಿ ಗುಣವಂತನಾಗಿ ಬಾಳು-ಎಂದು ಆಶೀರ್ವದಿಸಿದರು. ಆ ಮುನಿಗೆ ಕಣ್ಣೀರು ತೊಟ್ಟಿಕ್ಕಿತು. ಹೃದಯಸ್ಥೈರ್ಯ ಕಳಚಿತು. ನಿಟ್ಟುಸಿರು ಬಿಡುತ್ತ ಚಿಂತಿಸುತ್ತ ಮಹಾಮುನಿ ಕೂಡ ಸಾಮಾನ್ಯ ಮನುಷ್ಯರಂತೆ ದುಃಖಕ್ಕೊಳಗಾದರು."

ಯಾವುದೇ ರಸಾಭಿವ್ಯಕ್ತಿಯಲ್ಲೂ ಇದೇ ಬಗೆಯ ತನ್ಮಯತೆಯನ್ನು ಎಳುತ್ತಚ್ಛನ್ ಪ್ರದರ್ಶಿಸಿದ್ದಾನೆ, ಪಾತ್ರಗಳು ಸಂತೋಷಗೊಂಡಲ್ಲಿ, ದುಃಖಗೊಂಡಲ್ಲಿ, ಕ್ಷೋಭೆಗೊಂಡಲ್ಲಿ ಎಲ್ಲಿಯೇ ಆಗಿರಲಿ ಸಾರ್ವಕಾಲಿಕವಾಗಿ ಉಳಿಯುವ ಆದರ್ಶಗಳನ್ನು ಎತ್ತಿ

(37ನೇ ಪುಟ ನೋಡಿ)

(6ನೇ ಪುಟದಿಂದ)

ಯಜಸ್ಸು, ಅಥರ್ವ ಎಂಬ ನಾಲ್ಕು ವೇದಗಳನ್ನು ಅಧ್ಯಯನ ಮಾಡಿರುವವರೂ, ದೇವ ಪಿತೃ, ಭೂತ, ಮಾನವ ಮತ್ತು ಬ್ರಹ್ಮ ಎಂಬ ಪಂಚಯಜ್ಞ ಮಾಡುವವರೂ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ ಮತ್ತು ಪ್ರತಿಗ್ರಹ ಎಂಬ ಕ್ರಿಯೆಯಲ್ಲಿ ನಿರತರಾಗಿರುವವರೂ, ಯಾವಾಗಲೂ ನಿನ್ನನ್ನೇ ಆಶ್ರಯಿಸುವರು

"ಇಂದ್ರಿಯ ನಿಗ್ರಹಮಾಡಿ, ಹಸಿವು ಭೋಗ, ನಿದ್ರೆ ಎಲ್ಲವನ್ನೂ ಪೂರ್ತಿಯಾಗಿ ನಾಶಮಾಡಿ ಪರಮಾತ್ಮನಾದ ನಿನ್ನನ್ನು ಪಡೆಯಬೇಕೆಂದು ತದೈಕಧ್ಯಾನ ಪರರಾಗಿ ಹಳ್ಳಿಯ ಮತ್ತು ಕೆಟ್ಟ ಕೆಲಸಗಳಿಗೆ ಕಾರಣವಾದ ಪುನರ್ಜನ್ಮವನ್ನು ನಾಶಮಾಡುವ ಅಭ್ಯಾಸವುಳ್ಳ ಯೋಗಿಗಳು ಮಾತ್ರ ನಿನ್ನ ಸಹಜ ಸ್ವಭಾವವನ್ನು ತಿಳಿಯಬಲ್ಲರು" ಎಂದು ಹೇಳಿದ್ದಾರೆ

ತಿರುಮಂಗೈಯಾಳ್ವಾರರ ಕೊನೆಯ ಪ್ರಬಂಧಗಳು ಶಿರಿಯಮಡಲ್ ಮತ್ತು ಪೆರಿಯಮಡಲ್. ಇವುಗಳಲ್ಲಿ ಅವರು ತಮಗೆ ಪ್ರೀತಿಪಾತ್ರಳಾದ ಪತ್ನಿಯ ಮೇಲಿನ ಪ್ರೇಮವನ್ನು ಪರಮಾತ್ಮನ ಕಡೆಗೆ ತಿರುಗಿಸಿದ್ದಾರೆ. ಇವರಿಗೆ ಪತ್ನಿಯು ಉತ್ತಮ ಶಿಕ್ಷಕಿಯಾಗುತ್ತಾಳೆ. ಇದರ ಫಲಿತಾಂಶವಾಗಿ ಇವರಿಗೆ ಸಹಿಸಲಾಗದಷ್ಟು ವಿಷಯ ವೇದನೆ, ಅನುಭವ ಮತ್ತು ಪ್ರೀತಿಪಾತ್ರ ವಸ್ತುವನ್ನು ಪಡೆಯುವ ನಿರೀಕ್ಷಣೆಯಲ್ಲಿ ಕುಸಿದು ನಿಶ್ಚೇತನಗೊಳ್ಳುವ ಪರಿಸ್ಥಿತಿ ಏರ್ಪಡುತ್ತದೆ. ಇದನ್ನು ಮಡಲ್ ವಿಚಾರ ಮಾಡುತ್ತದೆ. ಇದನ್ನು ಶರಣಾಗತಿ ತತ್ತ್ವದ ಆರನೆಯ ಅಂಗವಾದ ಕಾರ್ಪಣ್ಯಕ್ಕೆ ಹೋಲಿಸಲಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಪ್ರೀತಿಯನ್ನು ಆಶ್ರಯಿಸದೆ ಬೇರೆ ಗತಿಯಿಲ್ಲ. ಪರಮಾತ್ಮಾನುಗ್ರಹ ಅಥವ ಅವನ ಅನಂತ ಕರುಣೆಗಾಗಿ ಕಾದಿರುವ ಅಸಹಾಯಕತೆಯ ಸ್ಥಿತಿ ಇಲ್ಲಿದೆ. ಇಂತಹ ಪರಿಸ್ಥಿತಿಯ ಧಾರ್ಮಿಕ ಅಗತ್ಯದ ಆಂತರಿಕ ಮನೋಭಾವನೆಯನ್ನು ಮಡಲ್ ಎಚ್ಚರಗೊಳಿಸುವುದು. ಪರಮಾತ್ಮನ ದಯೆಗಾಗಿ ಪ್ರಯತ್ನಿಸುವಂತೆ ಮಾಡುವುದು ಧಾರ್ಮಿಕ ರೀತಿಯಲ್ಲಿ ಪಾರಮಾರ್ಥಿಕ ಉದ್ದೇಶವನ್ನು ಸಾಧಿಸುವಂತೆ ಮಾಡುವುದು ಆಂಡಾಳ್, ಶಠಕೋಪರು ಮತ್ತು ಕುಲಶೇಖರರ ದಿವ್ಯ ಪ್ರೇಮದ ಅಮಲಿಗಿಂತ ತಿರುಮಂಗೈಯಾಳ್ವಾರರ ಪರಮಾತ್ಮ ಪ್ರೇಮವು ಬಹು ತೀವ್ರತರದ್ದಾಗಿದೆ ಪರಮಾತ್ಮನ ದೇವಾಲಯ, ಪ್ರಾಕಾರ, ಗೋಪುರಗಳ ನಿರ್ಮಾಣದಲ್ಲಿ ತಮ್ಮ ಪ್ರೇಮಪೂರಿತ ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ.

ಪೆರಿಯ ಮಡಲಿನಲ್ಲಿ ಆಳ್ವಾರರು ತಿಳಿಸಿರುವ ವಿಷಯವನ್ನು ಹೀಗೆ ಸಂಗ್ರಹಿಸಬಹುದು. ಚೇತನನ ಮುಖ್ಯ ಉದ್ದೇಶವನ್ನು ವೇದ ಮತ್ತು ಶಾಸ್ತ್ರಕ್ಕನುಸಾರವಾಗಿ ಪರಮಾತ್ಮನು ಋಷಿಗಳಿಗೆ ತಿಳಿಸಿದ್ದಾನೆ. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಪುರುಷಾರ್ಥಗಳು ಸರ್ವಸಮ್ಮತವಾದುವು. ಇವುಗಳಲ್ಲಿ ಮರಣಾನಂತರ ಪಡೆಯತಕ್ಕದ್ದು ಮೋಕ್ಷ. ಮೋಕ್ಷ ಪಡೆಯುವುದಕ್ಕೆ ಅನೇಕರು ಕಠಿಣ ವ್ರತಾಚರಣೆ ಮಾಡುತ್ತಾರೆ. ದೇಹವನ್ನು ದಂಡಿಸುತ್ತಾರೆ. ಐಹಿಕ ಐಶ್ವರ್ಯ ಪಡೆಯುವುದೂ ಕಷ್ಟ. ಆದುದರಿಂದ ಮಾನವನಿಗೆ ಮುಖ್ಯವಾದುದು, ಭಕ್ತಿ ಮತ್ತು ಪ್ರೀತಿಗಳೆರಡು. ಅವೇ ಪುರುಷಾರ್ಥಗಳು. ಇದಕ್ಕಾಗಿ ಸರ್ವ ಪ್ರಯತ್ನ ನಡೆಸಬೇಕು. ಪರಮಾತ್ಮನ ಮೇಲಿನ ಪ್ರೀತಿಯು ದಿವ್ಯ ಮತ್ತು ಶಾಶ್ವತವಾದುದು ಉಮಾ, ಸೀತೆ, ವೇದವತಿ. ಉಲೂಪಿ – ಮುಂತಾದವರು ತಮ್ಮ ಪತಿ ಪ್ರೇಮವನ್ನು ಸಾರ್ವಜನಿಕವಾಗಿ ತೋರಿಸಿ, ಪೋಷಿಸಿ ಅಂತಹ ಪವಿತ್ರ ಪ್ರೇಮವನ್ನು ಸಾಧಿಸುವುದಕ್ಕಾಗಿ, ತಮ್ಮ ಪ್ರಾಣಾರ್ಪಣೆ ಮಾಡುವುದಕ್ಕೂ ಸಿದ್ಧರಾಗಿದ್ದರು. ಹೀಗೆಂದು ಮಡಲಿನಲ್ಲಿ ತಿಳಿಸಲಾಗಿದೆ.

ತಿರುಮಂಗೈಯಾಳ್ವಾರರು ತಮಿಳು ಭಾಷೆಯಲ್ಲಿ ಅದ್ಭುತ ಪಾಂಡಿತ್ಯ ಪಡೆದಿದ್ದರು. ಆಶು, ವಿಸ್ತಾರ, ಮಧುರ ಮತ್ತು ಚಿತ್ರ ಎಂಬ ನಾಲ್ಕು ವಿಧ ಕವನಗಳಲ್ಲಿ ವಿಶೇಷ ರೀತಿಯ ಪ್ರತಿಭೆ ಹೊಂದಿದ್ದರು. ಅವರ ಶಬ್ದರಚನಾಸಾಮರ್ಥ್ಯ ಅಸಾಧಾರಣವಾದುದು. ಅವರ ದಿವ್ಯ ಪ್ರಬಂಧಗಳು ಸ್ವರಮೈತ್ರಿಮೇಳವುಳ್ಳ ಮಧುರ ಸಾಂಗತ್ಯದಂತೆ, ಸೊಗಸಾದ ಸಾಹಿತ್ಯಕೃತಿಗಳಾಗಿವೆ ಈ ಪಾಶುರಗಳನ್ನು ಉಚ್ಚರಿಸುವಾಗಲೇ ಭಗವದನುಭವ ಭಾವನೆ ಉಂಟಾಗುತ್ತದೆ "ಈ ದಿವ್ಯ ಪ್ರಬಂಧವನ್ನು ಹಾಡುವುದರಿಂದ ನನ್ನ ಹೃದಯದೊಳಗೆ ನೀನಿರುವೆ, ಎಂಬುದನ್ನು ನೀನೇ ತೋರಿಸಿದೆ" ಎಂದು ಆಳ್ವಾರರು ಹೇಳಿದ್ದಾರೆ. ಅನುಪ್ರಾಸ, ಪ್ರಮಾಣ ವಿನ್ಯಾಸ, ಧ್ವನಿ ಎಲ್ಲವೂ ಕರ್ಣಾನಂದಕರವಾಗಿ, ಆತ್ಮಪರವಶತೆಯ ಮೋಹಕ ಕವನವೋ ಎನ್ನುವಂತೆ, ಈ ಪ್ರಬಂಧಗಳು ಪ್ರಕಾಶಿಸುತ್ತವೆ ಈ ಪ್ರಬಂಧಗಳ ಸಾಹಿತ್ಯ ಸಂಗೀತ ಸೊಬಗನ್ನು ಭಕ್ತರು ಇಂದೂ ಅನುಭವಿಸುತ್ತಿದ್ದಾರೆ. ಇಂತಹ ಆತ್ಮಾನಂದ ಸುಖವನ್ನು ಎಲ್ಲರೂ ಪಡೆಯುವಂತಾಗಲಿ.


# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು "ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ" ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

(35ನೇ ಪುಟದಿಂದ)

[illegible] ಪೂರ್ವ [illegible] ಆತನ ಪ್ರಸಿದ್ಧ [illegible] ಉಳಿಯುವಂತೆ [illegible]

ಎಳುತ್ತಚ್ಛನ್ ರಾಮಾಯಣ ಮಹಾಭಾರತ [illegible] ಸಂಸ್ಕೃತ [illegible] ಶತಮಾನಗಳ ಕಾಲ ಜನಸಾಮಾನ್ಯ [illegible] ಭಾಷೆ [illegible] ಇಂದಿಗೂ ಕೇರಳೀಯರಲ್ಲಿ [illegible] ಹೇಯವಾಗಿ, ಭಕ್ತಿಪೂರ್ವಕವಾಗಿ ಈ ಕೃತಿಗಳನ್ನು ಇಟ್ಟುಕೊಂಡಿದ್ದಾರೆ

ಎಳುತ್ತಚ್ಛನ್ ಮಲಯಾಳದ ಶ್ರೇಷ್ಠ ಕವಿ. ಈತ ಮಲಯಾಳ ಭಾಷೆಯನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ರೂಪಿಸಿ, ಮಲೆಯಾಳ ಸಾಹಿತ್ಯವನ್ನು ಇತರ ಭಾರತೀಯ ಸಾಹಿತ್ಯದ ಜೊತೆ ತಲೆಯೆತ್ತಿ ನಿಲ್ಲುವಂತೆ ಮಾಡಿದ. ಮಲೆಯಾಳಭಾಷೆ ತಮಿಳು ಮತ್ತು ಸಂಸ್ಕೃತದ ಪ್ರಭಾವಕ್ಕೊಳಗಾಗಿ ತನ್ನತನವನ್ನು ಕಳೆದುಕೊಂಡಿತ್ತು. ಇಂತಹ ಸ್ಥಿತಿಯಲ್ಲಿದ್ದ ಮಲಯಾಳ ಭಾಷೆಯನ್ನು ಮಹಾಕವಿ ಎಳುತ್ತಚ್ಛನ್ ಸ್ವತಂತ್ರ ಸ್ಥಿತಿಗೆತ್ತಿಕೊಂಡದ್ದು ಇದನ್ನು ಒಬ್ಬ ವಿಮರ್ಶಕರು "ದ್ರಾವಿಡ ಗೋತ್ರೋದ್ಭವೆಯಾಗಿರುವ ಸೌಭಾಗ್ಯವತಿ ಕೇರಳಭಾಷೆ ಆರ್ಯವಂಶಾಲಂಕೃತನಾದ ಚಿರಂಜೀವಿ ಸಂಸ್ಕೃತವರನ ಸ್ವಯಂವರ ನಿಷ್ಠವಾಗಿ ವಿವಾಹನಡೆದು ಪುನಃ ಪುನಃ ಉಲ್ಲಸಿತಳಾಗುತ್ತಿದ್ದಾಳೆ. ಈ ಸುಂದರವಾದ ಸಂಬಂಧವನ್ನು ಅಥವಾ ವಿವಾಹವನ್ನು ಬೇಕಾದ ರೀತಿಯಲ್ಲಿ ಚಿಂತಿಸಿ ಬಹಳ ಚೆನ್ನಾಗಿ ನೆರವೇರಿಸಿದ ವ್ಯಕ್ತಿ ಸಾಕ್ಷಾತ್ ರಾಮಾನುಜನ್ ಎಳುತ್ತಚ್ಛನನೆಂಬ ಮಹಾತ್ಮನಾಗಿದ್ದಾನೆ" ಎಂದು ಹೇಳಿದ್ದಾರೆ. ತಮಿಳು ಅಕ್ಷರಮಾಲೆಗೆ ಬದಲಾಗಿ ಮಲಯಾಳ ವರ್ಣಮಾಲೆಯ ಆರ್ಯಲಿಪಿಯನ್ನು ಈತ ಬಳಕೆಗೆ ತಂದ ಇದನ್ನೇ ಇಂದಿನವರೂ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ಬಳಸುತ್ತಿರುವುದು ಗಮನಾರ್ಹಣೀಯವಾದ ವಿಚಾರವಾಗಿದೆ. ಮಲೆಯಾಳ ಸಾಹಿತ್ಯದಲ್ಲಿ ಈತ ಒಂದು ಹೊಸಯುಗವನ್ನು ಪ್ರವರ್ತಿಸಿದನೆಂದರೆ ತಪ್ಪಾಗಲಾರದು.

*

## ಕನ್ನಡದಲ್ಲಿ ಮಹಾಭಾರತ :

—ಮೈಸೂರು ವಿಶ್ವವಿದ್ಯಾನಿಲಯ ಯೋಜನೆ.

ಪೂನಾದ ಭಂಡಾರಕರ್ ಸಂಶೋಧನಾಸಂಸ್ಥೆ ಪ್ರಕಟಿಸಿರುವ ಮಹಾಭಾರತವನ್ನು ಇಪ್ಪತ್ತು ಸಂಪುಟಗಳ ಹತ್ತು ವರ್ಷದ ಅವಧಿಯಲ್ಲಿ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಲಾಗುವುದು. ಮೊದಲ ಸಂಪುಟವು ಮುದ್ರಣದ ಹಂತದಲ್ಲಿದ್ದು ನವಂಬರ್ ತಿಂಗಳಿನಲ್ಲಿ ಪ್ರಕಟವಾಗುವ ನಿರೀಕ್ಷೆ ಇದೆ

ಯೋಜನೆಯ ವಿವರಗಳನ್ನು ನೀಡಿದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾದ ಡಾ॥ ತಿಪ್ಪೇರುದ್ರಸ್ವಾಮಿಯವರು ಈ ಯೋಜನೆಗೆ ಕರ್ನಾಟಕ ರಾಜ್ಯಸರಕಾರ ನೆರವು ನೀಡಿದೆ ಎಂದು ತಿಳಿಸುತ್ತ ಕನ್ನಡದಲ್ಲಿ ಧರ್ಮಶಾಸ್ತ್ರದ ಇತಿಹಾಸ, ಹಿಂದೂ ಕಾನೂನಿನ ಗ್ರಂಥಗಳನ್ನೂ ಪ್ರಕಟಿಸುವ ಯೋಜನೆಯಿದೆಯೆಂದೂ ಧರ್ಮಶಾಸ್ತ್ರದ ಇತಿಹಾಸದ ಮೊದಲ ಸಂಪುಟ ಈಗಾಗಲೇ ಪ್ರಕಟವಾಗಿದೆಯೆಂದೂ ತಿಳಿಸಿದರು.

## ಹಂಪೆಯಲ್ಲಿ ಕನ್ನಡ ವಿಶ್ವವಿದ್ಯಾನಿಲಯ

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದು ಇತಿಹಾಸ ಪ್ರಸಿದ್ಧವಾಗಿರುವ ಹಂಪೆಯಲ್ಲಿ ವಿಶ್ವಕನ್ನಡ ಮೇಳದ ನೆನಪಿಗಾಗಿ ಕನ್ನಡ ಭಾಷೆ ಸಾಹಿತ್ಯ, ಸಂಸ್ಕೃತಿ, ಕರ್ನಾಟಕ ಸಂಗೀತ, ಮತ್ತಿತರ ಲಲಿತಕಲೆಗಳ ಬೋಧನೆ, ಅಧ್ಯಯನ, ಸಂಶೋಧನೆಗಳಿಗೆ, ಅವಕಾಶವಾಗುವ ಕನ್ನಡ ವಿಶ್ವವಿದ್ಯಾನಿಲಯವೊಂದನ್ನ ಸ್ಥಾಪಿಸಲಾಗುವುದು ಎಂದು ಕರ್ನಾಟಕ ರಾಜ್ಯದ ಕೃಷಿ ಸಚಿವ ಶ್ರೀ ಎಂ. ಪಿ. ಪ್ರಕಾಶ್ ಅವರು ತಿಳಿಸಿದ್ದಾರೆ.

## ಪುರಂದರ ಪ್ರಶಸ್ತಿ

ಪುರಂದರ ದಾಸರ ನೆನಪಿನಲ್ಲಿ ಖ್ಯಾತ ಸಂಗೀತ ವಿದ್ವಾಂಸರಿಗೆ ಪುರಂದರ ಪ್ರಶಸ್ತಿಯನ್ನು ನೀಡಲು ಕರ್ನಾಟಕ ರಾಜ್ಯಸರ್ಕಾರ ಯೋಜಿಸಿದೆ. ಪುರಂದರ ದಾಸರ ಐದುನೂರನೇ ಹುಟ್ಟು ಹಬ್ಬವನ್ನು 1985 ರ ಜನವರಿ 6 ರಂದು ಹಂಪೆಯಲ್ಲಿ ವೈಭವದಿಂದ ಆಚರಿಸಲು ರಾಜ್ಯಸರ್ಕಾರ ನಿರ್ಧರಿಸಿದೆ ಎಂದು ಸಚಿವ ಶ್ರೀ ಎಂ ಪಿ. ಪ್ರಕಾಶ್ ಅವರು ತಿಳಿಸಿದ್ದಾರೆ.

ಕೃಪೆ ಕನ್ನಡಪ್ರಭ

## ಗಣೇಶೋತ್ಸವದಲ್ಲಿ ಸಾಮೂಹಿಕ ವಿವಾಹಗಳು

ಕೋಲಾರದ ಸಾರ್ವಜನಿಕ ಶ್ರೀ ಗಣೇಶೋತ್ಸವ ಸಮಿತಿಯ ಆಶ್ರಯದಲ್ಲಿ ಸ್ಥಳೀಯ ಹಳೇ ಮಾಧ್ಯಮಿಕಶಾಲೆಯಲ್ಲಿ 18–9–85 ರ ವರೆಗೆ ಸಡಗರ ಸಂಭ್ರಮಗಳಿಂದ ಶ್ರೀ ಗಣೇಶೋತ್ಸವ ನಡೆದು, ತದಂಗವಾಗಿ 22–9–85 ರ ಬೆಳಗ್ಗೆ ಸಾಮೂಹಿಕ ವಿವಾಹಗಳು ನಡೆದವು.

ಸಾಮೂಹಿಕ ವಿವಾಹಗಳಲ್ಲಿ ಭಾಗವಹಿಸಿ, ವಧೂವರರನ್ನು ಆಶೀರ್ವದಿಸಿ ಮಾತನಾಡಿದ ಬೇಲಿಮಠದ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ವರ್ಷೇ ವರ್ಷೇ ಗಣೇಶೋತ್ಸವದಲ್ಲಿ ಸಾಮೂಹಿಕ ವಿವಾಹಗಳನ್ನೂ ಯಶಸ್ವಿಯಾಗಿ ನಡೆಸುತ್ತಿರುವ ಸಂಘಟಿತ ಯುವಶಕ್ತಿಯನ್ನು ಅಭಿನಂದಿಸಿ, ಧಾರ್ಮಿಕ ಭಾವದ ಈ ಕಾರ್ಯಕ್ರಮಗಳು ಹೆಚ್ಚು ಹೆಚ್ಚಾಗಿ ನಡೆಯಲಿ ಎಂದು ಕರೆನೀಡಿದರು.

ಚಿನ್ಮಯ ಮಿಷನ್ನಿನ ಶ್ರೀ ಬ್ರಹ್ಮಾನಂದ ಸರಸ್ವತಿಸ್ವಾಮಿಗಳಿಂದ ಆರಂಭ ಹೊಂದಿದ ಗಣೇಶೋತ್ಸವ, ದಿನವೂ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಕ್ತಿತರಂಗಗಳನ್ನು ಹರಡಿ ಅಪಾರ ಜನ ಮನ್ನಣೆಯನ್ನು ಗಳಿಸಿ, 25-9-85ರ ಬುಧವಾರ ಭವ್ಯವಾದ ಮೆರವಣಿಗೆಯಲ್ಲಿ ನಡೆದು ಶ್ರೀ ಗಣೇಶ ವಿಸರ್ಜನೆಯಲ್ಲಿ ಪರ್ಯವಸಾನ ಹೊಂದಿತು.

## ಮುಂದಿನ ಸಂಚಿಕೆಯಲ್ಲಿ .... ..

ಸಪ್ತಗಿರಿ. ಡಿಸೆಂಬರ್ — 1985

**ಮಹಾಭಾರತ**
— ಡಾ|| ಎನ್. ಅನಂತರಂಗಾಚಾರ್

**ರಮಣಮಹರ್ಷಿ**
— ಸಿ ಎಸ್. ಕೃಷ್ಣಮೂರ್ತಿ

**ವಾರಣಮಾಯಿರಂ**
— ಕೆ ದೊರೆಸ್ವಾಮಿ ಅಯ್ಯಂಗಾರ್

**ಶಬರಿಮಲೆಯ ಅಯ್ಯಪ್ಪ**
— ವಿಶಾಲಾಕ್ಷಿ ಕೆ. ಭಟ್

**ಶ್ರೀರಂಗಪಟ್ಟಣದ ಗಂಗಾಧರೇಶ್ವರಸ್ವಾಮಿ**
— ಕೆ ಕೇಶವಮೂರ್ತಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು ಬರೆಯಿರಿ — ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯ ದಿನಗಳು

## ಡಿಸೆಂಬರ್ 1985

| | | |
|---|---|---|
| 9. | ಸೋಮವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಾರ್ತೀಕ ಸೋಮವಾರಾಭಿಷೇಕ. |
| 11. | ಬುಧವಾರ | ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಲ್ಲಿ ಅಧ್ಯಯನೋತ್ಸವಾರಂಭ. |
| 16. | ಸೋಮವಾರ | ಧನುಸ್ಸಂಕ್ರಮಣ |
| 22 | ಭಾನುವಾರ | ವೈಕುಂಠ ಏಕಾದಶಿ, ಮುಕ್ಕೋಟಿ ಏಕಾದಶಿ, ಗೀತಾ ಜಯಂತಿ |
| 23 | ಸೋಮವಾರ | ಮುಕ್ಕೋಟಿ ದ್ವಾದಶಿ, ಸ್ವಾಮಿ ಪುಷ್ಕರಿಣೀ ತೀರ್ಥ ಮುಕ್ಕೋಟಿ |
| 24. | ಮಂಗಳವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 26. | ಗುರುವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ, ದತ್ತ ಜಯಂತಿ. |
| 27. | ಶುಕ್ರವಾರ | ಆರ್ದ್ರಾದರ್ಶನೋತ್ಸವ. |

ಹೆಚ್ಚಿಗೆ ಐದು ತರಗತಿಗಳನ್ನು ಏರ್ಪಡಿಸುವುದಾಗಿಯೂ ಅಧ್ಯಕ್ಷರು ತಿಳಿಸಿದರು. ಹಿಂದೂ ಧರ್ಮ ರಕ್ಷಣ ಸಂಸ್ಥೆಯು, ಮೂರು ಕೇಂದ್ರಗಳಿಗೆ ಮೂರು ಫಿಲಿಂ ಪ್ರೊಜೆಕ್ಟರ್‌ಗಳನ್ನು ನೀಡುತ್ತಿದ್ದಾಗಿಯೂ ಕಾಲಕ್ರಮದಲ್ಲಿ ಎಲ್ಲ ಜಿಲ್ಲೆಗಳಿಗೂ ಈ ಯೋಜನೆಯನ್ನು ವಿಸ್ತರಿಸಲಾಗುವುದೆಂದೂ ತಿಳಿಸಿದರು.

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಪಾಕಶಾಲೆಯನ್ನು ಆಧುನಿಕೀಕರಣಗೊಳಿಸುತ್ತ ಮೊದಲಿಗೆ 20 ಶತಾಂಶ ಕೆಲಸ ನಡೆಸಿದೆಯೆಂದೂ ಇದಕ್ಕಾಗಿ 5 ಲಕ್ಷ ರೂಗಳು ವೆಚ್ಚವಾಗಿದೆಯೆಂದೂ ಅವರು ತಿಳಿಸಿದರು.

### ಹೈದರಾಬಾದಿನಲ್ಲಿ ಕಲ್ಯಾಣಮಂಟಪ

ಸೆಪ್ಟಂಬರ್ 6 ರಂದು ಹೈದರಾಬಾದಿನ ಹಿಮಾಯತ್ ನಗರದ ಬಾಲಾಜಿ ಭವನದ ಬಳಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮಾರಾವ್ ಅವರು ತಿ. ತಿ. ದೇ ಕಲ್ಯಾಣ ಮಂಟಪ ಸಮುದಾಯಕ್ಕೆ ಶಿಲಾನ್ಯಾಸ ಮಾಡಿದರು. ಈ ಕಲ್ಯಾಣ ಮಂಟಪ ಐದು ಅಂತಸ್ತುಗಳಲ್ಲಿದ್ದು ಮೊದಲೆರಡು ಅಂತಸ್ತುಗಳಲ್ಲಿ ವಾಹನ ನಿಲುಗಡೆಸ್ಥಳ, ಕಾರ್ಯಾಲಯಗಳು ಎರಡು ಅಂತಸ್ತುಗಳಲ್ಲಿ ಒಂದು ಕಲ್ಯಾಣ ಮಂಟಪವೂ, ಮೇಲಿನ ಅಂತಸ್ತಿನಲ್ಲಿ ಒಂದು ಮಿನಿ ಕಲ್ಯಾಣ ಮಂಟಪವೂ ಇರುವುವು.

ತತ್ಸಂದರ್ಭದಲ್ಲಿ ನಡೆದ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಗಳು 30 ತಿ. ತಿ ದೇ ಧಾರ್ಮಿಕ ಪ್ರಕಟನೆಗಳನ್ನೂ ಬಿಡುಗಡೆ ಮಾಡಿದರು. ಇವುಗಳಲ್ಲಿ ದಾಸಸಾಹಿತ್ಯ ಪ್ರಾಜೆಕ್ಟಿನ ತೆಲುಗು ಪುಸ್ತಕಗಳೂ ಸೇರಿವೆ.

### ಅನ್ನಮಾಚಾರ್ಯ ಸಂಕೀರ್ತನೆಗಳ ಕ್ಯಾಸೆಟ್ ಬಿಡುಗಡೆ

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಅನ್ನಮಾಚಾರ್ಯ ಮಂಟಪದಲ್ಲಿ ಅನ್ನಮಾಚಾರ್ಯರ ಸಂಕೀರ್ತನೆಗಳ ಎರಡು ಕ್ಯಾಸೆಟ್‌ಗಳನ್ನು ತಿ. ತಿ. ದೇ. ಬೋರ್ಡಿನ ಅಧ್ಯಕ್ಷ ಶ್ರೀ ಪಿ. ಕೆ. ಡಿ ವಿ. ಸತ್ಯನಾರಾಯಣ ರಾಜು ಬಿಡುಗಡೆ ಮಾಡಿದರು. ಈ ಎರಡು ಕ್ಯಾಸೆಟ್‌ಗಳಲ್ಲಿನ ಕೀರ್ತನೆಗಳನ್ನು ಶ್ರೀ ಎಂ ಬಾಲಮುರಳೀಕೃಷ್ಣ, ಶ್ರೀ ಬಾಲಕೃಷ್ಣ ಪ್ರಸಾದ್ ಶ್ರೀ ನಾಗೇಶ್ವರನಾಯುಡು, ಶ್ರೀಮತಿ ಎಸ್ ಜಾನಕಿ, ಕುಮಾರಿ ಎಸ್ ಪಿ. ಶೈಲಜ ಅವರುಗಳು ಹಾಡಿದ್ದು ಅನ್ನಮಾಚಾರ್ಯ ಪ್ರಾಜೆಕ್ಟ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಅವರು ವ್ಯಾಖ್ಯಾನ ನೀಡಿದ್ದಾರೆ. ಬಿಡುಗಡೆಯ ಕಾರ್ಯಕ್ರಮದಲ್ಲಿ ತಿ. ತಿ ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀಎಸ್. ಲಕ್ಷ್ಮೀನಾರಾಯಣ ಹಾಗೂ ಇತರರು ಹಾಜರಿದ್ದರು

Edited and Published on behalf of the T T Devasthanams by K Subba Rao, M A., and Printed at T T D Press by M Vijayakumar Reddy, Manager, T. T. D Press, Tirupati - 517501

